—( ಶ್ರೀರಸ್ತು. )—



# ಜೈಮಿನಿಭಾರತವು.

## ೨೦ ನೇ ಸಂಧಿ,

ಭಾವಾರ್ಥ, ಕಠಿಣಶಬ್ದಾರ್ಥ, ಸಹಿತ.

ಪ್ರಕಾಶಕರು:- ಪಿ. ಎನ್ ಬೀಡಿ.
ಕರ್ನಾಟಕ ಬುಕ್ ಡಿಪೋ,
ಧಾರವಾಡ.
ಗಾಂಧಿಚೌಕ.

" ಮೊದಲನೇ ಆವೃತ್ತಿ ೧,೦೦೦. ಪ್ರತಿಗಳು. "

ಬೆಲೆ ] ೧೯೨೭. [ ೫ ಆಣೆ.

—( ಗದಗ ಸತ್ಯಪ್ರಕಾಶ ಮುದ್ರಾಲಯದಲ್ಲಿ ಮುದ್ರಿಸಿ ಪ್ರಕಟಿಸಿದರು. )—

ಸೂಚನೆ|| ರಘುವರನ ತುರಗಮೇಧಾಧ್ವರದ ಕುದುರೆಯ ನ |
ಲಘು ಪರಾಕ್ರಮಿ ಲವಂ ತರಳತನದಿಂ ಕಟ್ಟ |
ಲಘಟಿತಮೆನಿಸಿತು ಶತ್ರುಘ್ನ ಲಕ್ಷ್ಮಣರ ತಳತಂತ್ರಕ್ಕೆ ಬಿಡಿಸಿಕೊಳಲು ||

**ಭಾವಾರ್ಥ :-** ರಾಮಚಂದ್ರನ ಅಶ್ವಮೇಧ ಯಜ್ಞದ ಕುದುರೆಯನ್ನು, ಬಹು ಪರಾಕ್ರಮಿಯಾದ ಲವನು ಅಜ್ಞಾನತನದಿಂದ ( ವಾಲ್ಮಿಕೀ ಮುನಿಯ ಆಶ್ರಮದಲ್ಲಿ ) ಕಟ್ಟಿರಲು ಅದನ್ನು ಲಕ್ಷ್ಮಣ ಶತ್ರುಘ್ನರ ಸೈನ್ಯಕ್ಕೂ ಸಹಬಿಡಿಸಿಕೊಂಡು ಹೋಗುವದಾಗಲಿಲ್ಲ.

**ಕಠಿಣ ಶಬ್ದಾರ್ಥ:-** ತುರಗ - ಅಶ್ವ, ರಘುವರ - ಶ್ರೀರಾಮಚಂದ್ರ, ಮೇಧ - ಯಜ್ಞ. ಅಲಘು - ಬಹಳ, ಅಘಟಿತ - ಅಸಾಧ್ಯ, ತಳತಂತ್ರ - ಸೈನ್ಯ.

ಹಿಮಕರಕುಲೇಂದ್ರ ಕೇಳ್ವಾಲ್ಮಿಕಿಮುನಿಪನಾ |
ಶ್ರಮದೊಳ್ಸಮಸ್ತ ಕಲೆಗಳನರಿದು ಕಾಕಪ |
ಕ್ಷಮನಾಂತು ಜಾನಕಿಯಶುಶ್ರೂಷೆಯೊಳ್ಸಂದು ಋಷಿಯ ಚಿತ್ತಕ್ಕೆ ಬಂದು ||
ಯಮಳರಿರೆ ಕಂಡು ಸಂಪ್ರೀತಿಯಿಂ ತಾಪಸೋ |
ತ್ತಮನಿತ್ತನಿಷು ಚಾಪ ಚರ್ಮ ಖಡ್ಗಂಗಳಂ |
ರಮಣೀಯ ಕವಚ ಕುಂಡಲ ಕಿರೀಟಂಗಳಂ ತನ್ನಯ ತಪೋಬಲದೊಳು. || ೧ ||

ಭಾವಾರ್ಥ:- ( ವೈಶಂಪಾಯನ ಋಷಿಯು ಹೇಳುತ್ತಾನೆ. ) ಚಂದ್ರವಂಶ ಶ್ರೇಷ್ಠನಾದ ಜನಮೇಜಯರಾಯನೇ ಕೇಳು, ವಾಲ್ಮಿಕಿಯ ಆಶ್ರಮದಲ್ಲಿ " ಲವ ಕುಶರು " ಜುಲುಪೆಯನ್ನು ಬಿಟ್ಟುಕೊಂಡವರಾಗಿ ಎಲ್ಲವಿದ್ಯೆಯನ್ನು ಕಲಿತು, ಸೀತಾದೇವಿಯ ಸೇವೆಯಲ್ಲಿದ್ದುಕೊಂಡು ವಾಲ್ಮಿಕಿಯ ಪ್ರೀತಿಗೂ ಮತ್ತು ಆಧಾರಕ್ಕೂ ಪಾತ್ರರಾದರು. ಆದ್ದರಿಂದ ಋಷಿಯು, ಈ ಅವಳೀ ಜವಳೀ ಮಕ್ಕಳಿಗೆ ಅತಿ ಪ್ರೀತಿಯಿಂದ, ತನ್ನ ತಪೋಬಲದಿಂದ, ಬಿಲ್ಲು ಮತ್ತು ಬಾಣ ಖಡ್ಗ, ಢಾಲುಗಳನ್ನು ಸುಂದರವಾದ ಕವಚ ಕರ್ಣಾಭರಣ ಕಿರೀಟುಗಳನ್ನು ಇತ್ತನು.

**ಕ. ಶ.** ಹಿಮಕರ - ಚಂದ್ರ, ಇಂದ್ರ - ಶ್ರೇಷ್ಠ, ಮುನಿಪ - ಮುನಿಶ್ರೇಷ್ಠ, ಕಲೆ - ವಿಧ್ಯೆ, ಕಾಕಪಕ್ಷ - ಜುಲುಪೆ, ಸಂದು - ಇದ್ದುಕೊಂಡು, ಯಮಳ - ಅವಳೀ ಜವಳಿ, ಚಾಪ - ಧನಸ್ಸು.

ಅವರ್ಗಳಂತಿರಲಯೋಧ್ಯಾಪುರದೊಳಿತ್ತ ರಾ |
ಘವನಖಿಳ ಧರಣಿಯಂ ಪಾಲಿಸುತೆ ಸೌಖ್ಯಾನು |
ಭವದೊಳೆಂದಿಸದೆ ರಾವಣವಧೆಯೊಳಂದು ಬಂದಾಬ್ರಹ್ಮಹತಿ ತನ್ನನು ||
ಅವಗಾಹಲದಕೆ ನಿಷ್ಕೃತಿ ಯಾವುದೆಂದು ಸಾ |
ರುವ ನಿಗಮದರ್ಥಮಂತಿಳಿದು ಹಯಮೇಧಮಂ |
ತವೆ ನೆಗಳ್ಚುವನಾಗಿ ನಿಶ್ಚೈಸಿ ಕರೆಸಿದಂ ವರವಶಿಷ್ಠಾದಿಗಳನು. || ೨ ||

ಭಾವಾರ್ಥ:- ಈ ರೀತಿಯಾಗಿ ಕುಶಲವರು ಇರಲು ಇತ್ತ ಅಯೋಧ್ಯೆಯಲ್ಲಿ.

ರಾಜ್ಯವನ್ನಾಳುತ್ತಿರುವ ಶ್ರೀರಾಮನು ಸುಖದಿಂದಿರಲಿಲ್ಲ. ರಾವಣನನ್ನು ಸಂಹರಿಸುವಾಗ ಪ್ರಾಪ್ತವಾದಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವೇನೆಂದು ಶೃತಿ, ಸ್ಮೃತಿಗಳಿಂದ ತಿಳಿದುಕೊಂಡು ಅಶ್ವಮೇಧಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿ ವಸಿಷ್ಠಾದಿ ಮುನಿವರ್ಯರನ್ನು ಕರೆಯಿಸಿದನು.

**ಕ. ಶ.** ಒಂದಿಸದೆ, ಕೂಡದೆ - ಪಡೆಯದೆ ಅವಘಡಿಸಲು - ಬಾಧಿಸಲು, ಅಖಿಳ - ಎಲ್ಲ, ನಿಗಮ - ವೇದಶೃತಿ, ತವೆ - ಚನ್ನಾಗಿ, ಹಯಮೇಧ - ಅಶ್ವಮೇಧ.

ವಾಮದೇವಾತ್ರಿ ಗಾಲವ ಗುರುವಶಿಷ್ಠ ವಿ |
ಶ್ವಾಮಿತ್ರರಂ ಕರೆಸಿ ಹಯಮೇಧಲಕ್ಷಣವ |
ನಾಮುನಿಗಳಂ ಕೇಳ್ದನುಜ್ಞೆಗೊಳಲವರಿದಕೆ ನಿಜಪತ್ನಿವೇಳ್ಕುವೆನಲು ‖
ಹೇಮನಿರ್ಮಿತವಾದ ಜಾನಕಿಯನಿರಿಸಿಕೊಂ |
ಡೀಮಹಾಯಜ್ಞಮಂ ನಡೆಸುವೆಂ ತಾನೆಂದು |
ರಾಮಚಂದ್ರಂ ನಿಖಿಳಋಷಿಗಳನೊಡಂಬಡಿಸಿ ಶಾಲೆಯಂ ಮಾಡಿಸಿದನು ‖ ೩ ‖

ಭಾವಾರ್ಥ:- ಶ್ರೀರಾಮನು ವಾಮ ಅತ್ರಿ ಗಾಲವ ವಸಿಷ್ಠ ವಿಶ್ವಾಮಿತ್ರ ಮೊದಲಾದ ಮುನಿಗಳನ್ನು ಕರೆಯಿಸಿ ಅಶ್ವಮೇಧಯಜ್ಞವನ್ನು ವಿಧಿಪೂರ್ವಕವಾಗಿ ಮಾಡುವರೀತಿಯನ್ನು ಕೇಳಿದನು ಆಗ ಅವರು ಯಜ್ಞಮಾಡಲಿಕ್ಕೆ ಧರ್ಮಪತ್ನಿಯು ಬೇಕು (ಎಲ್ಲಿರುವಳು) ಹೇಳುಎಂದು ಕೇಳಿದರು ರಾಮನು ಭಂಗಾರದ ಸೀತೆಯ ಪ್ರತಿಮೆಯೇ ತನ್ನ ಅರ್ಧಾಂಗಿಯಂದುಹೇಳಿ ಋಷಿಗಳಆಜ್ಞೆಯನ್ನುಹೊಂದಿ ಮಹಾಯಜ್ಞವನ್ನು ಪ್ರಾರಂಭಿಸಲಿಕ್ಕೆ ಯಜ್ಞಶಾಲೆಯನ್ನು ಸಿದ್ಧಪಡಿಸಿದನು.

**ಕ. ಶ.** ವೇಳ್ಪುದು - ಪೇಳ್ವುದು ಅಥವಾ ಹೇಳುವದು, ಅನುಜ್ಞ - ಅಪ್ಪಣೆ, ಹೇಮ - ಭಂಗಾರ, ನಿಖಿಳ - ಎಲ್ಲ.

ಬಳಿಕ ವೇದೋಕ್ತಪ್ರಕಾರದಿಂ ದೀಕ್ಷೆಯಂ |
ತಳೆದು ರಘುನಾಥಂ ತುರಂಗಮಂ ಪೂಜಿಸೈ |
ದಿಳೆಯೊಳ್ಚರಿಸಲದರ ಪಣೆಗೆ ತನ್ನಗ್ಗಳಿಕೆಯಂ ಬರೆದ ಪತ್ರಿಕೆಯನು ‖
ಅಳವಡಿಸಿ ಕೂಡೆ ಮೂರಕ್ಷೋಹಿಣಿ ಮೂಲ |
ಬಲಸಹಿತ ವೀರಶತ್ರುಘ್ನನಂ ಕಾವಲ್ಗೆ |
ಕಳುಹಿಬಿಡಲಾಹಯಂ ತಿರುಗುತಿರ್ದುದು ಧರೆಯಮೇಲಖಿಳ ದೆಸೆದೆಸೆಯೊಳು. ‖ ೪ ‖

ಭಾವಾರ್ಥ:- ಆಮೇಲೆ ವೇದದಲ್ಲಿ ಹೇಳಲ್ಪಟ್ಟ ಪದ್ಧತಿಯಂತೆ ರಾಮಚಂದ್ರನು ಯಜ್ಞದೀಕ್ಷೆಯನ್ನು ಹೊಂದಿದನು, ಕದುರೆಯನ್ನು ಪೂಜಿಸಿ ಅದರಹಣೆಗೆ ತನ್ನಬಿರುದು ಮೊದಲಾದ ಅಂಕಿತದಿಂದ ಸಹಿತವಾದ ಪಟವನ್ನುಕಟ್ಟಿ ಅದು ಭೂಮಿಯಮೇಲೆ ತಿರುಗಿಬರಲೆಂದು ಬಿಟ್ಟನು ಅದನ್ನು ಕಾಯಲಿಕ್ಕೆ ಮೂರು ಅಕ್ಷೋಹಿಣಿ ಸೈನ್ಯವನ್ನುಕೊಟ್ಟು ಶೂರನಾದ ಶತ್ರುಘ್ನನನ್ನು ಕಳುಹಿದನು. ಆಮೇಲೆ ಕುದುರೆಯು ಸಂಚಾರಕ್ಕೆಹೊರಟಿತು

**ಕ. ಶ.** ಉಕ್ತ - ಹೇಳಲ್ಪಟ್ಟ ದೀಕ್ಷೆ—ಯಾವದಾದರೊಂದು ಧರ್ಮಕಾರ್ಯವನ್ನುಮಾಡುವಾಗ ಶಾಸ್ತ್ರೋಕ್ತವಾಗಿ ಕೈಕಟ್ಟಿಕೊಂಡು ನಿಲ್ಲುವದು, ತಳೆ - ಧರಿಸು

( ಹೊಂದು, ) ಇಳೆ - ಭೂಮಿ, ಅಗ್ಗಳಿಕೆ - ಹೆಚ್ಚಳ ( ಶ್ರೇಷ್ಠತ್ವ. ) ಅಳವಡಿಸು - ಹಚ್ಚು, ಅಕ್ಷೋಹಿಣಿ - ೨೧೮೭೦ ಆನೆಗಳು ೨೧೮೭೦ ರಥಗಳು ೬೫೬೧೦ ಕುದುರೆಗಳು ಮತ್ತು ೧೦೯೩೫೦ ಕಾಲಾಳುಗಳುಳ್ಳ ಸೇನೆಯು.

ಬಲ್ಗಯ್ಯ ನೃಪರಂಜಿ ತಡೆಯದೆ ರಘೂದ್ವಹನ |
ಸೊಲ್ಗೇಳಿ ನಮಿಸಲಿಳೆಯೊಳ್ಚರಿಸುತಧ್ವರದ |
ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗದುಪವನದೊಳು ||
ಪುಲ್ಗಳ ಪಸುರ್ಗೆಳಸಿ ಪೊಕ್ಕುದಾತೋಟಗಾ ||
ವಲ್ಗೆ ಶಸ್ತ್ರೋಡನಾಡಿಗಳ ಕೂಡಿ ಲೀಲೆ ಮಿಗೆ |
ಬಿಲ್ಗೊಂಡು ನಡೆತಂಡವಂ ಕಂಡನರ್ಚಿತ ಸುವಾಜಿಯಂ ವೀರಲವನು || ೫ ||

ಭಾವಾರ್ಥ:- ಬಹುಪರಾಕ್ರಮಿಗಳಾದ ರಾಜರುಸಹ ಬೆದರಿ ಆ ಕುದುರೆಯನ್ನು ಕಟ್ಟಲಿಲ್ಲ. ಶ್ರೀರಾಮಚಂದ್ರನ ಹೆಸರುಕೇಳಿ ನಮಸ್ಕಾರಮಾಡುತ್ತಿದ್ದರು. ಹೀಗೆ ಬರಬರುತ್ತ ಆ ಸುಂದರವಾದ ಕುದುರೆಯು ವಾಲ್ಮೀಕಿ ಮುನಿಯ ಆಶ್ರಮಕ್ಕೆಬಂದು ಹಸರು ಹುಲ್ಲುನೋಡಿ ತಿನ್ನಲಿಕ್ಕೆ ಒಳಗೆ ಹೊಕ್ಕಿತು ಆಗ ತನ್ನಗೆಳೆಯರಸಂಗಡ ಆಡುವ ಮತ್ತು ತೋಟವನ್ನು ಕಾಯಲಿಕ್ಕೆ ನೇಮಿಸಲ್ಪಟ್ಟ ವೀರನಾದ “ ಲವನು ” ಧನುರ್ಧಾರಿಯಾಗಿ ಬಂದು ಆ ಕುದುರೆಯನ್ನು ನೋಡಿದನು.

**ಕ. ಶ.** ಬಲ್ಗಯ್ಯ - ಬಹಳಶೂರ, ರಘೂದ್ವಹ - ರಾಮಚಂದ್ರ, ಸೊಲ್ - - ಹೆಸರು ( ಕೇಳಿಕೆ ) ಅಧ್ವರ - ಯಜ್ಞ ಲೀಲೆಮಿಗೆ -ಆಟವುಹೆಚ್ಚಾಗಲು ಆಟದಭರದಲ್ಲಿ ಬಲ್ಗೊಂಡು - ಧನುಸ್ಸನ್ನುತೆಗೆದುಕೊಂಡು, ಅರ್ಚಿಸಿದ - ಪೂಜೋಡಿಸಿಕೊಂಡಂಥ.

ಎತ್ತಣತುಂಗಮಿದು ಪೊಕ್ಕು ಪೂದೋಟಮಂ |
ತೊತ್ತಳದುಳಿವುದು ವಾಲ್ಮೀಕಿಮುನಿನಾಥ ನೇ |
ಪೊತ್ತು ಮಾರ್ಕೈವುದೆಂದೆನಗೆ ನೇಮಿಸಿ ಪೋದನಬ್ಧಿಪಂ ಕರೆಸಲಾಗಿ ||
ಮತ್ತೆ ವರುಣನ ಲೋಕದಿಂ ಬಂದು ಮುಳಿದಪನೆ |
ನುತ್ತೆ ಹಯದೆಡೆಗೆ ನಡೆತಂದು ನೋಡಲ್ಕದರ |
ನೆತ್ತಿಯೊಳ್ಮೆರೆವ ಪಟ್ಟದ ಲಿಖಿತಮಂ ಕಂಡು ಲವನೋದಿ ಕುಳಿತಿರ್ದನು || ೬ ||

ಭಾವಾರ್ಥ: ಇದೆಲ್ಲಿಯ ಕುದುರೆಯು? ಹೂದೋಟವನ್ನು ಹೊಕ್ಕು ತುಳಿದು ನಾಶಮಾಡುತ್ತಿದೆ “ ವಾಲ್ಮೀಕಿಯು ಕಾಲಕಾಲಕ್ಕೆ ಜಾಗರೂಕನಾಗಿರು ” ಎಂದು ನನಗೆ ಆಪ್ಪಣೆಮಾಡಿ ವರುಣನು ಕರೆಯಿಸಿದ್ದರಿಂದ ಹೋಗಿರುವನು. ಅಲ್ಲಿಂದ ಬಂದಮೇಲೆ ಇದನ್ನೆಲ್ಲ ನೋಡಿ ಸಿಟ್ಟಾಗಲಿಕ್ಕಿಲ್ಲವೇ ? ಹೀಗೆತಾನು ವಿಚಾರಿಸುತ್ತ ಕುದುರೆಯಹತ್ತರ ಬಂದುನೋಡಲು, ಅದರ ಹಣೆಗೆಕಟ್ಟಿದ ಲಿಖಿತವನ್ನು ನೋಡಿ ಓದಲಾರಂಭಿಸಿದನು.

**ಕ. ಶ. ಅ.** ಎತ್ತಣ - ಎಲ್ಲಿಯ, ತೊತ್ತಳದುಳಿ - ಕಚಪಚನೆತುಳಿ ( ನಾಶಮಾಡು, ) ಪೊತ್ತುಂ - ಆಯಾಹೊತ್ತಿಗೆ, ಆರೈ - ರಕ್ಷಿಸು, ಅಬ್ಧಿಪಂ - ವರುಣನು ಮುಳಿ - ಸಿಟ್ಟಾಗು

ಉರ್ವಿಯೊಳ್ಕೌಸಲ್ಯ ಪಡೆದ ಕುವರಂ ರಾಮ |
ನೋರ್ವನೇ ವೀರನಾತನ ಯಜ್ಞತುರಗಮಿದು |
ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದ ಲೇಖನವನೋದಿ ‖
ಗರ್ವಮಂ ಬಿಡಿಸದಿರ್ದೊಡೆ ತನ್ನ ಮಾತೆಯಂ |
ಸರ್ವಜನಮುಂ ಬಂಜೆಯನ್ನದಿರ್ದಪುದೆ ತನ |
ಗುರ್ವತೊಳ್ಗೀವೇತಕೆಂದು ಸಲೆವಾಸಿಯಂ ತೊಟ್ಟು ಲವನುರಿದೆದ್ದನು ‖ ೭ ‖

ಭಾವಾರ್ಥ:- ಜಗತ್ತಿನಲ್ಲಿ ಕೌಶಲ್ಯೆಯ ಮಗನಾದ ರಾಮನೊಬ್ಬನೇ ವೀರನು ಇದು ಅವನ ಯಜ್ಞದ ಕುದುರೆಯು, ಇದನ್ನು ಯಾರಾದರೂ ತಡೆದು ನಿಸ್ತರಿಸಿಕೊಳ್ಳುವವರು ಇದ್ದರೆ ಬಂಧಿಸಲಿ ಎಂದು ಬರೆದ ಬರಹವನ್ನು ಓದಿ ಲವನು, ಶ್ರೀರಾಮಚಂದ್ರನ ಈ ತರಹದ ಗರ್ವವನ್ನು ಮುರಿಯುವೆನು ಇಲ್ಲವಾದರೆ ಜನರು ನನ್ನ ತಾಯಿಗೆ ಬಂಜೆಯನ್ನಲಿಕ್ಕಿಲ್ಲವೇ ! ಈ ಬಾಹು-ಬಲವಾದರೂ ಏತಕ್ಕೆಂದು ಅನ್ನುತ್ತ ಪಂಥವನ್ನು ತೊಟ್ಟು ಸಿಟ್ಟಿಗೆದ್ದನು

**ಕ. ಶ. ಅ.** ಉರ್ವಿ - ಭೂಮಿ, ನಿರ್ವಹಿಸಲಾರ್ಪರ್ - ನಿತ್ತರಿಸಿಕೊಳ್ಳಬಲ್ಲವರು, ಉರ್ವ - ಬಿರಿಷ್ಠ ವಾಸಿ - ಪಂಥ.

ತೆಗೆದುತ್ತರೀಯಮಂ ಮುರಿದು ಕುದುರೆಯ ಗಳಕೆ |
ಬಿಗಿಪು ಕದಳೀದ್ರುಮಕೆ ಕಟ್ಟಲ್ಕೆ ಮುನಿಸುತ |
ರ್ವಿಗೆ ನಡುಗಿ ಬೇಡಬೇಡರಸುಗಳ ವಾಜಿಯಂ ಬಿಡು ಬಡಿವರೆಮ್ಮನೆನಲು ‖
ನಗುತೆ ಪಾರ್ವರ ಮಕ್ಕಳಂಜಿದೊಡೆ ಜಾನಕಿಯ |
ಮಗನಿದಕೆ ಬೆದರುವೆನೆ ಪೋಗಿ ನೀವೆಂದು ಲವ |
ನಗಡುತನದಿಂದೆ ಬಿಲ್ದಿರುವನೇರಿಸಿ ತೀಡಿ ಜೇಗೈದು ನಿಂದಿರ್ದನು. ‖ ೮ ‖

ಭಾವಾರ್ಥ:- ತನ್ನ ಮೇಲಿನ ಹೊದಿಕೆಯನ್ನು ತೆಗೆದು ಕುದುರೆಯನ್ನು ಬಾಳೀಗಿಡಕ್ಕೆ ಕಟ್ಟಲಾಗಿ ಮುನಿಕುಮಾರರು ಬಹಳ ಬೆದರಿ ಬೇಡಬೇಡ ಅರಸರಕುದುರೆಯನ್ನು ಬಿಡು ನಮ್ಮನ್ನು ( ಅವರು ) ಹೊಡೆಯುವರು ಎನ್ನಲಾಗಿ ( ಲವನು ) ನಗುತ ಬ್ರಾಹ್ಮಣರ ಮಕ್ಕಳು ಹೆದರಿದರೆ ಜಾನಕಿಯ ಮಗನು ಇದಕ್ಕೆ ಹೆದರುವೆನೇ ? ನೀವು ಹೋಗಿರಿ ಎಂದು ಲವನು ಗರ್ಜಿಸಿ ಬಿಲ್ಲಿನ ಹೆದೆಯೇರಿಸಿ ಝೇಂಕರಿಸಿ, ನಿಂತುಕೊಂಡನು

**ಕ. ಶ.** ಉತ್ತರೀಯ - ಮೇಲುಹೊದಿಕೆ, ಕದಳಿ - ಬಾಳಿ, ದ್ರುಮ - ಗಿಡ, ವಾಜಿ - ಕುದುರೆ, ಪಾರ್ವ - ಹಾರುವ ( ಬ್ರಹ್ಮಣ ) ಅಗಡುತನದಿಂದ - ಉನ್ಮತ್ತನದಿಂದ, ಬಿಲ್ † ತಿರುವು - ಬಿಲ್ದಿರುವು ( ಬಿಲ್ಲಿನಹಗ್ಗದ ) ಜೇಗೈ - ಝೇಂಕರಿಸು ( ಟಂಕಾರಮಾಡು )

ಕುದುರೆಗಾವಲ ಸುಭಟರನಿತರೊಳೊದಗಿ ಬಂದು |
ಕದಳೀದ್ರುಮಕ್ಕೆ ಕಟ್ಟಿದತುರಗಮಂ ಕಂಡು |
ಸದಮಲಬ್ರಹ್ಮ ಚಾರಿಗಳನಾರ್ಭಟಿಸಿ ವಾಜಿಯನೇಕೆ ಬಿಗಿದಿರೆನಲು ‖
ಬೆದರಿನಾವಲ್ಲಿವಂ ಬೇಡಬೇಡೆನೆ ಬಂಧಿ |

ಸಿದನೆಂದು ಲವನಂ ಕರಾಗ್ರದಿಂ ತೋರಿಸಿದ |
ರದಟರೀತಂ ತರಳ ನರಿಯದೆಸಗಿದನೆಂದು ಬಿಡಹೇಳಿ ಗರ್ಜಿಸಿದರು ‖ ೯ ‖

ಭಾವಾರ್ಥ:— ಕುದುರೆಯ ಕಾವಲುಗಾರರಾದ ಮಹಾಪರಾಕ್ರಮಿಗಳು, ಅಷ್ಟರಲ್ಲಿ ಬಂದು ಜಾಳಿಯಗಿಡಕ್ಕೆ ಕಟ್ಟಿದ ಕುದುರೆಯನ್ನು ನೋಡಿ ನಿರ್ಮಲರಾದ ಬ್ರಹ್ಮಚಾರಿಗಳನ್ನು ಬೆದರಿಸಿ ಕುದುರೆಯನ್ನು ಏಕೆ ಕಟ್ಟಿದಿರೆಂದು ಅನ್ನಲಾಗಿ, ( ಆ ಮುನಿಕುಮಾರರು ) ಅಂಜಿ ನಾವಲ್ಲ ಬೇಡ ಬೇಡವೆಂದರೂ ಇವನು ಕಟ್ಟಿದನೆಂದು ಬಟ್ಟಿನಿಂದ ಲವನನ್ನು ತೋರಿಸಲಾಗಿ ಈ ಹುಡುಗನು. ತಿಳಿಯದೇ ಕಟ್ಟಿರುವನೆಂದು ಬಿಡಲಿಕ್ಕೆಹೇಳಿ ಗರ್ಜಿಸಿದರು.

**ಕ. ಶ.** ಅನಿತರೊಳ್ - ಅಷ್ಟರಲ್ಲಿ, ಸದಮಲ - ನಿರ್ಮಲ, ಕರಾಗ್ರ - ಬೊಟ್ಟು ಅಥಟರ್ - ಮಹಾಪರಾಕ್ರಮಿಗಳು ( ವೀರರು ) ಎಸಗಿದನು - ಮಾಡಿದನು.

ವಿಕ್ರಮವಿದೇಕೆ ಬಿಡೆನಶ್ವಮಂ ಮೇಣ್ಬಿಡಲು |
ಪಕ್ರಮಿಸಿದವರ್ಗಳ ಕರವನರಿವೆ ನೆನಲ ವರ |
ತಿಕ್ರಮಿಸಿ ವಾಜಿಯಂ ಬಿಡುವೋಡೈತರಲವರ ಕೈಗಳಂ ಕೋಪದಿಂದೆ ‖
ವಕ್ರಮಿಲ್ಲದೆ ಕೋಲ್ಗಳಿಂದೆಚ್ಚು ಕಡಿದೊಡನೆ |
ಶಕ್ರನದ್ರಿಯ ಮೇಲೆ ಮಳೆಗರೆವೊಲಾಸೈನ್ಯ |
ಚಕ್ರಮಂ ಮುಸುಕಿದಂ ವೀರಲವನಾಕ್ಷಣದೊಳೇನೆಂಬೆನದ್ಭುತವನು ‖ ೧೦ ‖

ಭಾವಾರ್ಥ:— ಈ ತರಹದ ( ಮಿಥ್ಯಾ ) ಪೌರುಷವೇತಕ್ಕೆ ಕುದುರೆಯನ್ನು ಬಿಡುವದಿಲ್ಲ ಮತ್ತು ಬಿಡಲಿಕ್ಕೆಬಂದವರ ಕೈಗಳನ್ನು ಕಡಿದುಹಾಕುವೆನು, ಎಂದು ಲವನ ಮಾತುಗಳನ್ನು ಕೇಳಿ ಕಿವಿಗೊಡದೆ ಕಟ್ಟಿದ ಕುದುರೆಯನ್ನು ಬಿಚ್ಚಬರಲು ಲವನು ಸಿಟ್ಟಿನಿಂದ ಬಾಣಗಳನ್ನು ಹೂಡಿ ಸರಿಯಾಗಿ ಅವರೆಲ್ಲರ ಕೈಗಳನ್ನು ಕಡಿದುಹಾಕಿದನು ಆಗ ಇಂದ್ರನ ಪರ್ವತದಮೇಲೆ ಮಳೆಗರಿಯುವಂತೆ ಲವನು, ಬಾಣಗಳ ಮಳೆಸುರಿಸಿ ಆ ಎಲ್ಲ ಸೈನ್ಯಸಮೂಹವನ್ನು ಆ ಕ್ಷಣದಲ್ಲಿಯೇ ಮುತ್ತಿದನು. ಜನಮೇಜಯರಾಜನೇ ಆ ಅದ್ಭುತವಾದ ಸಂಗತಿಯನ್ನು ವರ್ಣಿಸುವದು ಅಸಾಧ್ಯವು.

**ಕ. ಶ.** ವಿಕ್ರಮ - ಶೂರತನ, ಮೇಣ್ - ಮತ್ತೆ, ಉಪಕ್ರಮಿಸು - ಪ್ರಾರಂಭಿಸು, ಅರಿವೆನು – ಕತ್ತರಿಸುವೆನು, ವಕ್ರಮಿಲ್ಲದೆ – ಸರಿಯಾಗಿ, ಕೋಲ್ – ಬಾಣ, ಎಚ್ಚು - ಹೂಡು, ಶಕ್ರ - ಇಂದ್ರ, ಚಕ್ರ - ಸಮೂಹ.

ಬಾಲಕನ ಮೇಲೆ ಕವಿದುದು ಬಳಿಕ ಮುಳಿದು ಹಯ |
ಪಾಲಕಬಲಂ ಕರಿ ತುರಗ ರಥ ಪದಾತಿಗಳ |
ಜಾಲಕವ ನೋರ್ವನೆನ್ನದೆ ಬಾಣ ಪರಶು ತೋಮರ ಶಕ್ತಿ ಸುರಗಿಗಳೊಳು ‖
ಕಾಲಕಖಿಳ ಪ್ರಾಣಿಗಳ ನೈದೆ ಸಂಹರಿಪ |
ಶೂಲಕರನೆನೆಲವಂ ಕೊಲುತಿರ್ದನನಿಬರಂ |
ಕೋಲ ಕಡುವಳೆಗರೆದು ಮುಸಿಪನಿತ್ತಕ್ಷಯನಿಷಂಗಮೆಸೆದಿರೆಬೆನ್ನೊಳು. ‖ ೧೧ ‖

ಭಾವಾರ್ಥ:— ಆಮೇಲೆ ಕುದುರೆಯ ರಕ್ಷಕನ ( ಶತ್ರುಘ್ನನ ) ಸೈನ್ಯವು ಶಿಟ್ಟಿಗೆದ್ದು ಲವನಮೇಲೆ ಮುಗಿಬಿದ್ದು ಒಬ್ಬನೇ ಇರುವನೆಂಬದನ್ನು ಲಕ್ಷ್ಯಕ್ಕೆತಾರದೆ ಆನೆ, ಕುದುರೆ, ರಥ, ಕಾಲಾಳುಗಳ, ಸಮೂಹವು, ಬಾಣ, ಚಪಗೊಡಲಿ, ಟೊಣ್ಣೆ, ಬಲ್ಲೆ, ಕಠಾರಿಗಳಿಂದ, ಯುದ್ಧಮಾಡಹತ್ತಿತು. ಆದರೆ ಅವರೆಲ್ಲರನ್ನು ಪ್ರಳಯಕಾಲಕ್ಕೆ ಎಲ್ಲ ಜೀವಿಗಳನ್ನು ಸಂಹರಿಸುವ ಕಾಲರುದ್ರನಂತೆ ಲವನು ( ವಾಲ್ಮೀಕಿ ) ಋಷಿಯು ಕೊಟ್ಟ ಬತ್ತಳಿಕಿಯಲ್ಲಿಯ ಬಾಣಗಳು ಅಕ್ಷಯವಾಗಲು ( ಶತ್ರುಗಳಮೇಲೆ ) ಬಾಣಗಳ ಸುರಿಮಳೆಯನ್ನು ಸುರಿಸಿ ಸಂಹಸುತ್ತಿದ್ದನು.

**ಕ. ಶ.** ಮುಳಿದು - ಸಿಟ್ಟಾಗಿ, ಕರಿ - ಆನೆ, ಜಾಲ - ಸಮೂಹ, ಪರಶು — - ಚಪಗೊಡ್ಲಿ, ತೋಮರ - ಡೊಣ್ಣೆ, ಶಕ್ತಿ - ಭಾಲೆ, ಸುರಗಿ – ಕಠಾರಿ, ಶೂಲಧರ - ಕಾಲರುದ್ರ. ಅನಿಬರ್ - ಅವರೆಲ್ಲರು, ಅಕ್ಷಯ – ಎಂದೂ ಕಡಿಮೆಯಾಗದಂಥ, ನಿಷಂಘ - - ಬತ್ತಳಿಕೆ.

ಸಂಖೆಯಿಲ್ಲದೆ ಮೇಲೆ ಬೀಳ್ವಕೈದುಗಳೆಲ್ಲ |
ಮಂ ಖಂಡಿಸುತ್ತೊಡನೆ ಮುತ್ತಿದರಿ ಚತುರಂಗ |
ಮಂ ಖಾತಿಯಿಂದೆ ಸಂಹರಿಸುತೊಂದೊಂದರಿಪುಬಾಣಕೈದಂಬುಗಳನು ||
ಪುಂಖಾನುಪುಂಖದಿಂದಿಸುವ ಬಾಲಕನಿಸುಗೆ |
ಯಿಂ ಖಿಲಪ್ರಾಯಮಾಗಿರ್ದ ನಿಜಬಲಜಾಲ |
ಮಂ ಖರಾಂತಕನನುಜನೀಕ್ಷಿಸಿ ಕನಲ್ದೇರಿದಂ ಮಹಾಮಣಿರಥವನು || ೧೨ ||

ಭಾವಾರ್ಥ: — ಅಸಂಖ್ಯವಾಗಿ ಮೇಲೆಬೀಳುತ್ತಿರುವ ಶಸ್ತ್ರಗಳನ್ನು ತುಂಡರಿಸುತ್ತ ಕೂಡಲೇ ಮುತ್ತಿದಂಥ ವೈರಿಯ ನಾಲ್ಕೂತರಹದ ಸೈನ್ಯವನ್ನು ಸಿಟ್ಟಿನಿಂದ ಸಂಹರಿಸುತ್ತ ಶತ್ರುಗಳ ಒಂದೊಂದು ಬಾಣಕ್ಕೆ ಐದುಬಾಣಗಳನ್ನು ಒಂದೇಸವನೆ ( ಗರಿಯಹಿಂದೆ ಗರಿಯು ಹೋಗುವಂತೆ ) ಬಿಡುವ ಬಾಲಕನು ಶೋಭಿಸಲಾಗಿ, ಬಹುತರವಾಗಿ, ನಾಶ ಹೊಂದಿದಂಥ ತನ್ನ ಸೈನ್ಯ ಸಮೂಹವನ್ನು ನೋಡಿ ರಾಮಚಂದ್ರನ ತಮ್ಮನು ( ಶತ್ರುಘ್ನನು ) ಸಿಟ್ಟಿಗೆದ್ದು ದೊಡ್ಡರಥವನ್ನು ಏರಿದನು.

**ಕ. ಶ.** ಕೈದು - ಶಸ್ತ್ರ, ಪುಂಖ - ಗರಿ, ಖಿಲ - ಬರಿದಾದ ( ನಾಶವಾದ ) ಖರಾಂತಕ - ಖರಯಂಬ ರಾಕ್ಷಸನ ಸಂಹಾರಮಾಡಿದ ರಾಮಚಂದ್ರ, ಕನಲ್ದು - ಸಿಟ್ಟಿಗೆದ್ದು

ದುರಿತಗಣಮಿರ್ದಪುದೆ ಗೌತಮಿಯೊಳಾಳ್ದಂಗೆ |
ಪರಮಯೋಗಿಗೆ ಭವದ ಬಂಧನಂ ಬಂದಪುದೆ |
ಪರಸೈನ್ಯದುರುಬೆ ರಘುಕುಲಜರ್ಗೆ ತೋರುವುದೆ ಕೇಳವನಿಪಾಲತಿಲಕ ||
ತರಳನಾದೊಡೆ ಲವಂ ಬೆದರುವನೆ ನಿಮಿಷದೊ|
ಳ್ಪರೆಗಡಿದನಸಿತು ಚತುರಂಗಮಂ ಶತ್ರುಘ್ನ |
ನುರವಣಿಸೆ ತಡೆದನೆರಗುವ ಸಿಡಿಲ ಗರ್ಜನೆಗೆ ಮುಳಿವ ಮರಿಸಿಂಗದಂತೆ || ೧೩ ||

ಭಾವಾರ್ಥ:— ಗೌತವಿ ( ಗೋದಾವರಿ ) ನದಿಯಲ್ಲಿ ಸ್ನಾನಮಾಡಿದವನಲ್ಲಿ ಪಾಪವಿರ ವದೇ ? ಯೋಗೀಂದ್ರನಿಗೆ ಸಂಸಾರದ ಬಂಧನವು ಉಂಟಾಗ ವದೇ ? ( ಅದ ರಂತೆಯೇ ) ರಘು ವಂಶದಲ್ಲಿ ಜನಿಸಿದವರಿಂದ ಶತ್ರುಗಳ ಪರಾಕ್ರಮ ವು ಎಂದೂ ಲೆಕ್ಕಿಸ ಲ್ಪಡ ವದಿಲ್ಲ ಜನವೇ ಜಯ ಸೇಕೇಳ, ಲವನ ಹ ಡ ಗನಿದ್ದಾಗ್ಯೂ ಹೆದರಲಿಲ್ಲ ನಿಮಿ ಷ ದಲ್ಲಿ ಆ ಎಲ್ಲ ನಾಲ್ಕುಜಗಿಯ ಸೈನ್ಯಸಮೂಹವನ್ನು ತುಂಡರಿಸಿ ಅಸ್ತವ್ಯಸ್ತವಾಗಿ ಚಲ್ಲಿದ ನು. ಶತೃಘ್ನನು ತ್ವೇಷದಿಂದ ಮೇಲೆ ಏರಿಬರಲು ( ಆಕಾಶದಿಂದ ) ಕೆಳಗೆ ಬೀಳುವ ಸಿ ಡಿಲಿನ ಗರ್ಜನೆಗೆ ( ಎದುರಾಗಿ )ಅರ್ಭಟಿಸುವ ಸಿಂಹದ ಮರಿಯಂತೆ ಲವನು ಅವನನ್ನು ಎದುರಿಸಿದನು.

**ಕ. ಶ.** ಗೌತಮಿ – ಗೋಮತಿ ( ಗೋದಾವರಿ ) ನದಿಯು. ಆಳ್ದ – ಸ್ನಾನ ಮಾಡಿದ ( ಮುಳುಗಿದ, ) ಪರ - ವೈರಿ, ಉರುಬೆ - ಪರಾಕ್ರಮ, ಪರಿಗಡಿ - ತುಂಹರಿ ಸು ( ನಾಶಮಾಡು ) ಊರುವಣಿಸು - ಮೇಲ್ಬೀಳು, ( ಏರಿಬರು ) ಮಲೆವ - ಎದುರುನಿ ಲ್ಲುವ, ಮರಿಸಿಂಗ - ಸಿಂಹದಮರಿ.

ಒತ್ತಿ ಬಹ ಶತ್ರುಘ್ನನುರುಬೆಗೆ ಲವಂ ತನ್ನ |
ಚಿತ್ತದೊಳ್ಮಾಹೇಶಮಂತ್ರಮಂ ಸ್ಮರಿಸುತ್ತೆ |
ವ ತ್ತೆ ನಿರ್ಭಯನಾಗಿ ಮಾರಾಂತೊಡಾತನೆಲವೆಲವೊ ನೀಂ ಪಸುಳೆ ನಿನಗೆ ||
ತೆತ್ತಿಗರದಾರಕಟ ಸಾಯದಿರ್ಪೋಗೆನುತೆ |
ಹತ್ತುಶರದಿಂದೆಚ್ಚೊಡವನ ಬಾಣಂಗಳಂ |
ಕತ್ತರಿಸಿ ಕೂಡೆ ಭರತಾನುಜನ ಕಾರ್ಮುಕದ ಹೆದೆಯನಿಕ್ಕಡಿಗೈದನು || ೧೪ ||

ಭಾವಾರ್ಥ:— ವೇಗದಿಂದಬರುವ ಶತ್ರುಘ್ನರ ಪರಾಕ್ರಮಕ್ಕೆ ಲವನು ತನ್ನ ಮನದಲ್ಲಿ ಮಹೇಶಮಂತ್ರವನ್ನು ಸ್ಮರಿಸುತ್ತ ಮತ್ತ ನಿರ್ಭೀತನಾಗಿ ಎದುರಾಗಲು ಎಲೋ ಹುಡುಗನೇ ನಿನಗೆ ಹಿತಚಿಂತಕರಾರು ! ಅಯ್ಯೋ ? ಸಾಯಬೇಡ ಹೋಗು ಎನುತ ಹತ್ತು ಬಾಣಗಳಿಂದ ಹೊಡೆದಕೂಡಲೇ ಶತ್ರುಘ್ನನ ಬಿಲ್ಲನ್ನು ಎರಡುತುಂಡುಮಾಡಿದನು.

**ಕ. ಶ.** ಒತ್ತಿ - ವೇಗದಿಂದ ಬಹ - ಬರುವ ಮಹೇಶಮಂತ್ರ - ಈಶ್ವರಸಂ ಬಂಧವಾದ ಅಸ್ತ್ರಮಂತ್ರ ಮಾರಾಂತೊಡೆ - ಎದುರಾಗಲು ( ತಡೆಯಲು ) ಪಸುಳನೇ - ಹುಡುಗನೇ ತೆತ್ತಿಗರು - ಹಿತಚಿಂತಕರು ಶರ - ಬಾಣ ಭರತಾನುಜ - ಶತ್ರುಘ್ನ ಎಚ್ಚೊ ಡೆ - ಹೊಡೆಯಲು ಕಾರ್ಮುಕ - ಬಿಲ್ಲು ಇಕ್ಕಡಿಗೈ - ಎರಡುತುಂಡುಮಾಡು.

ತರಳನ ಪರಾಕ್ರಮಕೆ ಮೆಚ್ಚಿದಂ ಮತ್ತೊಂದು |
ತಿರುವನಳವಡಿಸಿದಂ ಕಾರ್ಮುಕಕೆ ಶತ್ರುಘ್ನ |
ನಿರದೆ ಕಣೆಮುರರಿಂ ಬಾಲಕನ ಪಣೆಯನೆಚ್ಚೊಡೆ ನಗುತೆ ಪರಿಮಳಿಸಿದ ||
ಏಂಹಿಗಳನಂಜಿಸುವ ಪೂಗಣೆವೊಲಾಯ್ತು ನಿ |
ಸ್ಸುರವಣೆಯ ಬಾಣಂಗಡೆಸುತೆ ಭರತಾನುಜನ
ತುರಗ ಸಾರಥಿ ವ ಊಥ ಧ್ವಜ ಶರಾಸನಂ ಗಳನವಂ ತಡೆಗಡಿದನು || ೧೫ ||

ಭಾವಾರ್ಥ:— ಶತ್ರುಘ್ನನು ಹುಡುಗನ ಪರಾಕ್ರಮಕ್ಕೆ ಮೆಚ್ಚಿದನು ಮತ್ತೊಂದು ಹಗ್ಗವನ್ನು ಬಿಲ್ಲಿಗೆಕಟ್ಟಿ ಆತನು ಮೂರುಬಾಣಗಳಿಂದ ಬಾಲಕನ ಹಣೆಗೆ ಬಿಡಲಾಗಿ, ಲವನು ನಗುತ ಪರಾಕ್ರಮದಿಂದ ಬಿಟ್ಟಬಾಣಗಳು ( ವಿರಹಿಗಳ ಪ್ರೇಮಪಾತ್ರರಾದ ಜನರನ್ನು ಅಂಜಿಸುವ ಬಾಣಗಳಂತಾದವು) ಹೂವಿನಬಾಣಗಳುಎಂದು, ಶತ್ರುಘ್ನನನ ಕುದುರೆ, ಸಾರಥಿ, ರಥ, ಧ್ವಜ, ಬಿಲ್ಲುಗಳನ್ನು ನಾಶಮಾಡಿದನು

**ಕ. ಶ.** ತಿರುವು - ಬಿಲ್ಲಿನಹಗ್ಗ, ಅಳಿವಡಿಸು - ಕಟ್ಟು ಪರಿಮಳಿಸಿದ - ಸುವಾಸನೆಯುಳ್ಳ ಉರುವಣೆಯ - ಪ್ರತಾಪವುಳ್ಳ, ಪರಾಕ್ರಮದ, ವರುಥ - ರಥ, ಶರಾಸನ-- ಬಿಲ್ಲು, ತಡೆಗಡಿ - ತುಂಡರಿಸು, ನಾಶಮಾಡು.

ಕೋಪದಿಂ ಪೊಸರಥಕಡರ್ದು ಶತ್ರುಘ್ನನುರು |
ಚಾಪಮಂ ಕೊಂಡು ದಿವ್ಯಾಸ್ತ್ರದಿಂದಿಸುತೆ ಬರ |
ಲಾ ಪಥದೊಳೆಣಿಕೆಗೈದಣ್ಣನಂ ಮಾತೆಯಂ ನೆನೆದು ಮನದೊಳ್ಮರುಗುತೆ ||
ಆಪಸುಳೆ ಮತ್ತೆ ಕಡುಧೈರ್ಯಮಂ ತವೆ ತಾಳ್ದಿ |
ನೋಪಮದೊಳೈದುಪ ಪಗೆಯ ಶರವ ನೆಡೆಯೊಳ್ಪ |
ತಾಪದಿಂ ಕತ್ತರಿಸಿ ಕೆಡಹಲ್ಕೆ ಬಯಲಾಯ್ತು ಕೂಟಸಾಕ್ಷಿಯ ಸಿರಿವೊಲು || ೧೬ ||

ಭಾವಾರ್ಥ:— ಶತ್ರುಘ್ನನು ಸಂತಾಪಗೊಂಡು ನೂತನವಾದ ರಥವನ್ನು ಏರಿದನು, ಮತ್ತೊಂದು ದೊಡ್ಡ ಬಿಲ್ಲನ್ನು ತಗೆದುಕೊಂಡು ದೇವತೆಗಳಿಂದ ಧಿಷ್ಟಿತವಾದ ಬಾಣಗಳನ್ನು ಬಿಡಹತ್ತಿದನು ಆಗ್ಯೆ ಲವನು ತನ್ನಅಣ್ಣನನ್ನೂ ತಾಯಿಯನ್ನೂ ನೆನಸಿ ಧೈರ್ಯಗೊಂಡು ಸೂರ್ಯನಂತೆ ಬಹಳ ಶೌರ್ಯದಿಂದ ಅವನ ಬಾಣವನ್ನು ಮಾರ್ಗದಲ್ಲಿಯೇ ತುಂಡರಿಸಿಬಿಟ್ಟನು ಆಗ ಅದು ಸುಳ್ಳುಸಾಕ್ಷಿ ಹೇಳುತ್ತಿರುವವನ ಐಶ್ವರ್ಯದಂತೆ ಅದೃಶ್ಯವಾಯಿತು.

**ಕ. ಶ.** ವುರು – ದೊಡ್ಡ ಅಡರ್ದು – ಹತ್ತಿ ( ಏರಿ ) ಪಥದೋಳ – – ಮಾರ್ಗದಲ್ಲಿ, ಪಗೆಯ - ವೈರಿಯು, ಎಣಿಕೆಗೈದನು - ವಿಚಾರಮಾಡಿದನು, ನಡೆಯೋಳ್ - ನಡುಮಾರ್ಗದಲ್ಲಿ, ಕೂಟ - ಸುಳ್ಳು, ಎಸುತೆ - ಪ್ರಯೋಗಿಸುತ್ತ.

ವಿಸ್ಮಯಾನ್ವಿತನಾದನಂದು ಶತ್ರುಘ್ನನಾ |
ಕಸ್ಮಿಕದ ಪಸುಳೆಯ ಪರಾಕ್ರಮಕೆ ಬಳಿಕ ವಿಲ |
ಯಸ್ಮರಾಂತಕನ ಪಣೆಗಣ್ಣಿಂದೆ ಪೊರಮಡುವ ದಳ್ಳುರಿಯ ತೆರದೊಳೆಸೆವ ||
ರಶ್ಮಿಗಳನುಗುಳ್ವಮೋಘದ ಬಾಣಮಂ ಪೂಡು |
ತಸ್ಮದಿಷುಘಾತನುಂ ನೋಡೆನುತಿಸಲ್ಕೆ ಮಂ |
ದಸ್ಮಿತದೊಳಾಸರಳನೆಚು ಲವನೆಡೆಯೊಳಿಕ್ಕಡಿಗೈದನೇವೇಳ್ವೆನು || ೧೭ ||

ಭಾವಾರ್ಥ:— ಶತ್ರುಘ್ನನು ಅಕಸ್ಮಾತ್ತಾಗಿ ಬಾಲಕನ ಈ ತರಹದ ಪರಾಕ್ರಮವನ್ನು ನೋಡಿ ಚಕಿತನಾದನು. ಆಮೇಲೆ ಮತ್ತೊಂದು ಬಾಣವನ್ನು ಹೂಡಿದನು. ಅದು ಪ್ರಳಯಕಾಲದ ರುದ್ರನ ಮೂರನೆಯ ಕಣ್ಣೊಳಗಿನ, ಉರಿಯಂತೆ ಕಿಡಿಗಳನ್ನು ಕಾ

ರುತ್ತಿತ್ತು ಅದನ್ನು ಹೂಡಿ ಶತ್ರುಘ್ನನು ., ಈ ನನ್ನ ಎಂದೂ ಹುಸಿಹೋಗದ ಬಾಣದ ಹೊಡತವನ್ನು ನೋಡು ಎಂದನು. ಆದರೆ ಲವನು ನಸುನಗುತ ( ಮತ್ತೊಂದು ಬಾಣ ವನ್ನು ಹೂಡಿ ) ಆ ಬಾಣವನ್ನು ನಡುಮಾರ್ಗದಲ್ಲಿಯೇ ತುಂಡರಸಿದನು.

**ಕ. ಶ.** ವಿಸ್ಮಯ - ಆಶ್ಚರ್ಯ, ಅನ್ವಿತ - ಕೂಡಿದ, ಪಸುಳೆ - ಬಾಲಕ, ವಿ ಲಯ - ಪ್ರಳಯ, ಸ್ಮರಾಂತಕ - ರುದ್ರ, ಪಣೆಗಣ್ಣು - ಹಣೆಯಲ್ಲಿರುವಕಣ್ಣು, ಪೊರಮ ಡು - ಹೊರಡು, ದಳ್ಳುರಿ - ಮಹಾಜ್ವಾಲೆ, ಕಶ್ಮ - ಕಿಡಿ, ಉಗುಳ್ವ - ಕಾರುವ (ಅಥ - ವಾ ಹೊರಗೆಡುವ ) ಅಮೋಘ - ಎಂದೂ ಹುಸಿ ಹೋಗದ ಇಷು - ಬಾಣ, ಘಾತ - ಹೊಡತ, ಎಸಲ್ಕೆ – ಬಿಡಲು, ಸರಳನು – ಬಾಣವನ್ನು, ಎಚ್ಚು – ಕಡಿದು, ಎಡೆಯೋ ಳ್ – ದಾರಿಯಲ್ಲಿ,

ಅರಸ ಕೇಳಾಶರದೊಳರ್ಧಮವನಿಗೆ ಕೆಡೆದು |
ದಿರದೆ ಮೆಲ್ವಾದರ್ಧಮಿಾಲವನ ಕಾರ್ಮುಕವ |
ನರಿದು ಕೊಂಡೆರ್ದೆಯನುಚಳಿಸೆ ಮೈಮರೆದೊರಗಿದಂ ಪಸುಳೆ ಮೂರ್ಛೆಯಿಂದೆ ||
ಹರುಷದಿಂದಾರ್ದು ದುಳಿದರಿಬಲಂ ನಡೆತಂದು |
ಕರುಣದಿಂ ತರಳನಂ ನೋಡಿ ರಾಮಾಕೃತಿವೊ |
ಲಿರೆ ಮೋಹದಿಂ ತನ್ನ ರಥದ ಮೇಲೆರಿಸಿಕೊಂಡೈದಿದಂ ಶತ್ರುಘ್ನನು ‖ ೧೮ ‖

ಭಾವಾರ್ಥ:— ಅರಸನೇಕೇಳು ( ಲವನು ಆಬಾಣವನ್ನು ತುಂಡರಸಿದಮೆಲೆ ) ಆ ಬಾಣದ ( ಹಿಂದಿನ ) ಅರ್ಧ ಭಾಗವು ನೆಲಕ್ಕೆ ಬಿತ್ತು ಮುಂದಿನ ಅರ್ಧ ಭಾಗವು ಬಿ ಲ್ಲಿನಮೇಲೆ ಬಿದ್ದು ಅದನ್ನು ತುಂಡುಮಾಡಿ ಎದೆಗೆ ತಾಕಲು ಲವನು ಮೂರ್ಛೆ ಹೊಂದಿ ಮೈಮರೆತು ನೆಲಕ್ಕೆ ಬಿದ್ದನು ಶತ್ರುಸೈನ್ಯಕ್ಕೆ ಸಂತೋಷ ವಾಯಿತು ಶತ್ರುಘ್ನನಿಗೆ ಕರು ಣ ಹುಟ್ಟಿತು. ( ಅವನನ್ನು ) ಬಂದು ನೋಡಲು ಆ ಹುಡುಗನ ಮುಖವು ರಾಮನನ್ನು ಹೋಲುತ್ತಿತ್ತು ಅದನ್ನು ಕಂಡು ಪ್ರೀತಿಯಿಂದ ( ಲವನನ್ನು ) ತನ್ನ ರಥದ ಮೇಲೆ ತೆಗೆ ದು ಕೊಂಡು ಬಂದನು

**ಕ. ಶ.** ಆರ್ದು – ಆರ್ಭಟಿಸಿ, ಕೆಡೆದುದು - ಬಿತ್ತು, ಇರದೆ – ನಿಲ್ಲದೆ, ಅರಿ ದುಕೊಂಡು – ಕಡಿದುಹಾಕಿ, ಉಚ್ಚಳಿಸೆ , ಭೇದಿಸಲು, ಐದಿದಂ – ಬಂದನು.

ಕದಳಿಯೊಳಕಟ್ಟಿರ್ದ ಕುದುರೆಯಂ ಬಿಡಿಸಿ ನಗ |
ರದ ಕಡೆಗೆ ಪಡೆವೆರಸಿ ತಿರುಗಿದಂ ಶತ್ರುಘ್ನ |
ನುದಧಿಘೋಷದೊಳಿತ್ತ ಲೋಡಿದರ್ತಾಪಸ ವಟುಗಳ ವನಿಸುತೆಯ ಪೊರೆಗೆ ||
ಕದನದೊಳ್ನಡೆದ ವೃತ್ತಾಂತಮಂ ಪೇಳಲ್ಕೆ |
ರುದಿತದಿಂ ಕೈವೆರಳ್ಗಳನೊತ್ತಿ ಕೊಳುತೆ ನಿಜ |
ಸದನಮಂ ಪೊರಮಟ್ಟು ಹಲುಬಿದಳ್ಸುತನ ಗುಣಸೀಲರೂಪಗಳನೆನಿಸಿ || ೧೯ ||

ಭಾವಾರ್ಥ:— ಶತ್ರುಘ್ನನು ಜಯಘೋಷದಿಂದ ಬಾಳೀಯು ಗಿಡಕ್ಕೆ ಕಟ್ಟಿದ ಕುದುರೆಯನ್ನು ಬಿಚ್ಚಿ ಪಟ್ಟಣದ ಕಡೆಗೆ ಸೈನ್ಯ ಸಹಿತವಾಗಿ ಮರಳಿದನು ಇತ್ತ ಮುನಿಕುಮಾರರು ಸೀತೆಯ ಬಳಿಗೆ ಹೊಗಿ ಯುದ್ಧದಲ್ಲಿ ನಡೆದ ವೃತ್ತಾಂತವನ್ನು ಹೇಳಲು ದುಃಖಿತಳಾಗಿ ತನ್ನ ಮಗನ ಗುಣಸೀಲ ರೂಪಗಳನ್ನು ನೆನೆಸನಿಸಿ ಅತ್ತಳು.

**ಕ. ಶ.** ಪಡೆ – ಸೈನ್ಯ. ವುದಧಿ ಘೋಷ – ಜಯ ಘೋಷ, ಪೊರೆ – ಬಳಿಗೆ( ಹತ್ತರ ) ಪೊರಮಟ್ಟು – ಹೊಗಿ, ಹಲುಬಿದಳು - ಅತ್ತಳು.

ಒಸರಿದುವು ಕಂಬನಿಗಳಂಗಲತೆ ಕಂಪಿಸಿತು |
ಪೊಸೆದಳೊಡಲಂ ಕೂಡೆ ಕೂಡೆ ಸುತಮೋಹದಿಂ |
ದಸವಳಿದು ಕಂದನೆಲ್ಲಿರ್ದಪಂ ಕಾದಿದನೆ ಪಗೆಯ ಕೈಗೊಳಗಾದನೇ ||
ಪಸುಳೆಗೇನಾಯ್ತೊ ಮಗನೆಂತು ನೊಂದನೊ ತರಳ |
ನಸುವಿಡಿದಿಹನೊ ಬಾಲಕನ ಮುದ್ದುಮೊಗವೆನ್ನ |
ದಸೆಗೆ ಸೈರಿಸದೊ ಜೀವಿಸಿ ಕೆಟ್ಟೆನೆಂದು ಹಲಬಿದಳಂಬುಜಾಕ್ಷಿ ಮರುಗಿ !! ೨೦ ||

ಭಾವಾರ್ಥ:— ಸೀತೆಯ ಕಣ್ಣುಗಳಿಂದ ಕಣ್ಣೀರುಗಳು ಸುರಿದವು ಆಕೆಯ ಕೋಮಲ ಶರೀರವು ನಡುಗಿತು ( ನೆಲದಮೇಲೆ ) ಹೊರಳಾಡಿದಳು ಆಗಾಗ್ಯೆ ಪುತ್ರ ಪ್ರೇಮದಿಂದಾ ನಿಟ್ಟುಸುರು ಬಿಟ್ಟು ಮಗನೆಲ್ಲಿರುವನು ಯುದ್ಧ ಮಾಡಿದನೇ ವೈರಿಯ ಕೈ ಸೇರಿದನೇ ಮಗನಿಗೆ ಏನಾಯಿತು ಮಗನು ಎಷ್ಟು ಕಷ್ಟ ಬಟ್ಟನೊ ಬಾಲಕನು ಜೀವದಿಂದಿರುವನೇ ಆ ಮಗುವಿನ ಮುದ್ದು ಮುಖವನ್ನು ನೊಡುವದು ನನ್ನ ದುರ್ದೆಸಗೆ ಸಹಿಸದು ಛೆ ಜೀವಿಸಿಕೆಟ್ಟೆನೆಂದು ಆ ಸೀತೆಯು ಹಂಬಲಿಸಿದಳು ( ದುಃಖಿಸಿದಳು )

**ಕ. ಶ.** ಪೊಸೆದಳ್ – ಹೋರಳಾಡಿದಳು ಒಡಲ್ - ಹೊಟ್ಟೆ ಪಸುಳ - ಹುಡುಗ ( ಮಗ ) ಅಸು - ಜೀವ ದೆಶೆ - ಸ್ತಿತಿ.

ಅನ್ನೆಗಂ ಬಂದನಗ್ಗದ ಸಮಿತ್ಪುಷ್ಪಂಗ |
ಳನ್ನೆತ್ತಿಯೊಳ್ಪೊತ್ತುಕೊಂಡು ಕುಶನಳುತಿರ್ಪ |
ತನ್ನ ತಾಯಂ ಕಂಡಿದೇನದ್ಭುತಪ್ರಳಾಪಂ ನಿನಗೆ ಪೇಳೆನಲ್ಕೆ ||
ಬನ್ನಮಂ ಕೇಳ್ಮಗನೆ ಹಯಮೊಂದು ಬರಲದಂ |
ನಿನ್ನ ತಮ್ಮಂ ಕಟ್ಟಲರಸುಗಳ್ಪಿಡಿದೊಯ್ದು |
ರಿನ್ನೇವೆನೆಂದು ಜಾನಕಿ ನುಡಿಯೆ ರೋಷದಿಂದಾಕುವರನಿಂತೆಂದನು || ೨೧ ||

ಭಾವಾರ್ಥ:— ಅಷ್ಟರಲ್ಲಿ ಕುಶನು ಹೂಗಳನ್ನೂ ಅರಳೆ ಕಟ್ಟಿಗೆಗಳನ್ನು ತಲೆಯಮೇಲೆ ಹೊತ್ತುಕೊಂಡು ಬಂದು ಅಳುತ್ತಿರುವ ತನ್ನ ತಾಯಿಯನ್ನು ನೋಡಿ ನಿನಗೆ ಅಗಾಧವಾದ ದುಃಖವು ಯಾಕೆ ಬಂದಿರುವದು ಹೇಳು ಎಂದು ಕೇಳಲಾಗಿ ಮಗನೇ ಬ

ದಗಿದ ಕಷ್ಟವನ್ನು ಕೇಳು ಒಂದು ಕುದುರೆಯು ಬರಲಾಗಿ ಅದನ್ನು ನಿನ್ನ ತಮ್ಮನು ಕಟ್ಟಿ ಹಾಕಲು ಅದರ ( ಒಡೆಯರಾದ ) ಅರಸರು ಲವನನ್ನು ಹಿಡಿದುಕೊಂಡು ಹೊದರು ಇನ್ನೇನುಮಾಡಲಿ ಎಂದು ಸೀತಾದೇವಿಯು ಅನ್ನಲು ಕುಶನು ಸಿಟ್ಟಿನಿಂದ ಈ ಪ್ರಕಾರ ಅಂದನು

**ಕ. ಶ.** ಇನ್ನೇವೆನು - ಇನ್ನೇನು ಮಾಡಲಿ, ಅನ್ನೆಗಂ - ಅಷ್ಟರಲ್ಲಿ, ಅಗ್ಗದ- - ಸ್ವಲ್ಪುಬೆಲೆ ಬಾಳುವ, ಸಮಿತ್ - ಅರಳೇಕಟ್ಟಿಗೆ, ಅದ್ಭುತ - ಅಗಾಧವಾದ.

ಶೋಕಮೇಕಿದಕೆ ಹರಣವನುಯ್ದೋಡಂತಕನ |
ಲೋಕಮಂ ಸುಡುವೆನಲ್ಲಹುದೆಂದೊಡಜ ಹರಿ ಪಿ |
ನಾಕಿಗಳ ನುರಿಪುವೆಂ ಮಿಕ್ಕರಸುಗಿರಸುಗಳ ಪಾಡಾವುದೀಗ ತನಗೆ ||
ಆಕವಚ ಶರ ಧನುಃ ಖಡ್ಗ ಮುಕುಟಂಗಳಂ |
ತಾ ಕಳವಳಿಸದಿರೆಂದವನಿಜಗೆ ನುಡಿದೊಡವ |
ಳಾಕುಶಂಗೊಳಗಣಿಂದಂಗಿಯಂ ತಂದಳವಡಿಸಿ ಪರಸಿ ಬೀಳ್ಕೊಟ್ಟಳು || ೨೨ ||

ಭಾವಾರ್ಥ:— ಇದಕ್ಕೇಕೆ ಇಷ್ಟು ದುಃಖ ಪ್ರಾಣವನ್ನು ಹರಣ ಮಾಡುವ ಯಮುನ ಲೊಕವನ್ನು ಸುಟ್ಟು ಬಿಡುವೆನು ಬ್ರಹ್ಮ ವಿಷ್ಣು ಮಹೇಸ್ವರರನ್ನು ಸಹ ನಾಶಗೊಳಿಸುವೆನು ಹೀಗಿರಲು ಉಳಿದ ಅರಸು ಗಿರಸುಗಳ ಪಾಡೇನು ಆ ( ನನ್ನ ) ಕವಚ ಖಡ್ಗ ಬಿಲ್ಲು ಬಾಣ ಕಿರೀಟಗಳನ್ನು ಕೊಡು ದುಃಖಿಸಬೇಡ ಎಂದು ತಾಯಿಗೆ ( ಸೀತೆಗೆ ) ಹೇಳಲು ಅವಳು ಕುಶನಿಗೆ ಒಳಗಿನಿಂದ ಚಿಲಕತ್ತ್ರನ್ನು ತಂದು ( ಅವನಿಗೆ ) ತೊಡಿಸಿ ಆಶೀರ್ವದಿಸಿ ಕಳುಹಿಕೊಟ್ಟಳು.

**ಕ. ಶ.** ಹರಣ – ಪ್ರಾಣ, ಅಜ - ಬ್ರಹ್ಮ, ಪಿನಾಕಿ – ಮಹೇಶ್ವರ, ವುರುಪವೆಂ - ನಾಶಮಾಡುವೆನು, ಅಳವಡಿಸೀ - ತೊಡಿಸಿ, ಪರಿಸಿ - ಆಶೀರ್ವದಿಸಿ, ಬಿಳ್ಕೊಡು - - ಕಳುಹು.

ರಾಯ ಕೇಳ್ಕುಶನ ವಿಕ್ರಮುವನಭಿವರ್ಣಿಸಲ |
ಚಾಯುವುಳ್ಳನ್ನೆಗಂ ತನಗೆ ತೀರದು ಬಳಿಕ |
ತಾಮಂಘ್ರಿಗೆರಗಿ ಬೀಳ್ಕೊಂಡು ತಾರಕನ ಪೆರ್ಚಡೆಗೆ ಗುಹನೈದುವಂತೆ ||
ವಾಯುವೇಗದೊಳೊದಗಿ ವೀರಭರತಾನುಜನ |
ಪಾಯುದಳವುಂ ಪೋಗಜೇಡ ಜೇಡೆನುತೆ ಸಲೆ |
ಸಾಯಕದ ಮಳೆಗಳಂ ಕರೆಯಲ್ಕೆ ತಿರುಗಿದುದು ಮತ್ತೆ ಶತ್ರುಘ್ನಸೇನೆ || ೨೩ ||

ಭಾವಾರ್ಥ:— ಅರಸನೇ ಕೇಳು ಆಗಿನ ಕುಶನ ಪರಾಕ್ರಮವನ್ನು ಸರಿಯಾಗಿ ವರ್ಣಿಸುವದು ಬ್ರಹ್ಮದೇವರ ಆಯುಃಷ್ಯ ಇದ್ದರೂ ಸಹ ಸಸ್ನಿಂದಾಗದು. ಕುಶನು ತನ್ನ ತಾಯಿಗೆ ನಮಸ್ಕರಿಸಿ ಅಪ್ಪಣೆ ಪಡೆದು ತಾರಕಾಸುರನ ಸಂಹಾರಕ್ಕೆ ಹೊರಟ ದೊಡ್ಡ ಸೈನ್ಯಕ್ಕೆ ಗುಹನು ಸೇನಾಪತಿಯಾಗಿ ಬರುವಂತೆ ಕುಶನು ಕೂಡಲೆ ರಣಾಂಗಕ್ಕೆ ಬಂದ

ಸ್ಟ್ರ ಶತ್ರುಘ್ನನ ಸೈನ್ಯದ ಕಡೆಗೆ ನೋಡಿ ತಿರುಗಿ ಹೊಗಬೇಡಿರಿ ಎಂದೆನ್ನುತ್ತ ಬಾಣಗಳ ಮಳೆಯನ್ನು ಸುರಿಸಲಾಗಿ ಆ ಸೈನ್ಯವು ಮತ್ತೆ ತಿರುಗಿತು.

**ಕ. ಶ.** ವಿಕ್ರಮ – ಶೌರ್ಯ ( ಪರಾಕ್ರಮ ) ಅಜಾಯು - ಬ್ರಹ್ಮನ ಆಯುಷ್ಯ, ಉಳ್ಳನ್ನೆಗಂ - ಇರುವವರಿಗೆ, ಪಡೆ - ಸೈನ್ಯ, ಪೆರ್ಬಡೆ – ಮಹಾಸೈನ್ಯ, ಸಾಯಕ – ಬಾಣ.

ಪದ್ದೆರಗಿದುವು ಭಟರ ಮುಂಡೆಗಳ ಮೇಲುಡಿದು |
ಬಿದ್ದುವು ಚಲಧ್ವಜಪತಾಕೇಗಳ್ಕೂಡೆ ದೂ |
ಳೆದ್ದು ಬಿರುಗಾಳಿ ಬೀಸಿಮುದು ಕಂಬನಿ ಕರೆದುವಂದಾನೆಕುದುರೆಗಳ್ಗೆ ‖
ಪೊದ್ದಿದುತ್ಪಾತಭಯಕಾಬಲಂ ಗಜಬಜಿಸು |
ತಿದ್ದುದೀಜೆಯೊಳೀಕುಶಂ ಪೋಗದಿರಿ ನಿಲ್ಲಿ |
ಕದ್ದೊಯ್ದುದುವೊಡೆ ತುರಗಸಹಿತ ಲವನಂ ಬಿಟ್ಟು ನಡೆಯಿ ನೀವೆನುತೆಚ್ಚನು ‖ ೨೪ ‖

ಭಾವಾರ್ಥ;— ( ಕಣದಲ್ಲಿ ಮಡಿದುಬಿದ್ದ ) ವೀರರ ರುಂಡಗಳಿಗೆ ಹದ್ದುಗಳು ಎರಗ್ಗಿದವು ( ರಥದ ) ಧ್ವಜದಪತಾಕಿಗಳು ಕತ್ತರಿಸಿಬಿದ್ದವು ಆಗ ಬಿರುಗಾಳಿಬೀಸಿ ಧೂಳಮುಸಕಿತು. ಆನೆ, ಕುದುರೆಗಳಿಗೆ ಸಹ ಕಣ್ಣೀರುಬಂದವು ಸಂಕಟವಾಗಿತು. ಭಯದಿಂದ ಸೈನ್ಯದಲ್ಲಿ ಅಲ್ಲೋಲ ಕಲ್ಲೋಲ ವಾಯಿತು ಇತ್ತಕಡೆಗೆ ಕುಶನು ನಿಲ್ಲಿರಿ ತುಡುಗು ಮಾಡಿಕೊಂಡು ಒಯುಪಿರಾ? ಕುದುರೆ ಸಹಿತ ಲವನನ್ನು ಬಿಟ್ಟು ಹೋಗಿರಿ ಎಂದು ಬಾಣವನ್ನು ಬಿಟ್ಟನು.

**ಕ. ಶ.** ಪೊದ್ದು – ಹದ್ದು, ಮುಂಡೆ – ರುಂಡ, ಉಡಿದು – ಕತ್ತರಸಿ, ಉತ್ಪಾತ - ಸಂಕಟ, ಗಜಬಜಿಸು - ಅಲ್ಲೋಲ ಕಲ್ಲೋಲವಾಗು, ಎಚ್ಚನು – ಬಿಟ್ಟನು.

- ಅಬಾಲಕನ ಬಾಣಘಾತದಿಂದಳವಳಿದು |
ದೀಬಲದ ಮಂದಿ ಮತ್ತೀಗಳಿವನೋರ್ವ ನಿದೆ |
ಕೋ ಬಂದನೆಂದಿಸುವ ಜಿಸೆಗಳ್ಗೆ ದೆಸೆಗೆಟ್ಟು ಸೇನೆ ಗಜಬಜಿಸೆ ಕಂಡು ‖
ಶಾಬಮೃಗಮಂಜಿಪುದು ಗಡ ಪುಲಿಯೆನೆನುತಾ ಮ |
ಹಾಬಾಹು ಶತ್ರುಘ್ನನಾಗ ನಿಜದಳಪತಿಯ |
ನೀ ಬೇಗ ಕಳುಹಿದೊಡವಂ ಸಕಲಸೇನೆಸಹಿತೈದಿದಂ ಕುಶನಮೇಲೆ ‖ ೨೫ ‖

ಭಾವಾರ್ಥ:— ಆಹುಡುಗನ ಬಾಣದ ಹೊಡತದಿಂದ ಈ ಸೈನ್ಯದವರೆಲ್ಲರೂ ಕಂಗೆಟ್ಟರು ಮತ್ತು ( ಈಗಾದರೂ ) ಇವನೊಬ್ಬನೇ ಇರುವನು ಇಕೋ ನೋಡಿರಿ ಇವನ ( ಕುಶನ ) ಬಾಣಗಳ ಹೊಡತಕ್ಕೆ ಸೈನ್ಯವು ಅಸ್ತವ್ಯಸ್ತವಾಗಿ ದಿಕ್ಕಾಪಾಲಾಇತು ಆದರೆ ಜಿಗರೆಯಮರಿಗೆ ಹುಲಿಯು ಎಂದಾದರೂ ಹೆದರಬಹುದೆ? ಎಂದು ಮಹಾ ಪರಾಕ್ರಮಿಯಾದ ಶತ್ರುಘ್ನನು ತನ್ನಸೇನಾಪತಿಯನ್ನು ಕಳುಹಿಸಿ ಆಮೇಲೆ ಎಲ್ಲ ಸೈನ್ಯದೊಂದಿಗೆ ಕುಶನ ಮೇಲೆ ಬಂದನು.

**ಕ. ಶ.** ಅಳವಡಿದು - ಕಂಗೆಟ್ಟು, ಬೆಸೆ - ಹೊಡತ, ಶಾಬಮೃಗ -ಚಿಗರೇ -ಮರಿ ,ಐದಿದಂ – ಬಂದನು

ಬಳಿಕ ಶತ್ರುಘ್ನನ ನಿರೂಪದಿಂ ತಿರುಗಿದಾ |
ದಳಪತಿ ಸಮಸ್ತ ಬಲಸಹಿತಾಕುಮಾರನಂ |
ಬಳಸಿವಂ ತಮತಮಗೆ ವಿವಿಧಾಯುಧಂಗಳಂ ಜಾಳಿಸುತೆ ವಹಿಲದಿಂದೆ ||
ಅಳವಿಯೊಳ್ತೀವಿದುವು ಕುದುರೆ ತೇರಾನೆಯಾ |
ಳ್ಕೊಳುಗುಳದೊಳನಿತುಮಂ ಸವರಿ ಸೇನಾನಿಯಂ |
ಕಳುಹಿದಂ ಜವಪೊಳಲ್ಗವಸ ಸಾರಥಿರಥಾಶ್ವಂಜೆರಸಿ ವೀರಕುಶನು ‖ ೨೬ ‖

ಭಾವಾರ್ಥ:— ಆಮೇಲೆ ಶತ್ರುಘ್ನನ ಅಪ್ಪಣೆಯಿಂದ ಸೇನಾಪತಿಯು ಯಾವತ್ತೂ ಸೈನ್ಯದೊಡನೆ ಹೊರಟನು ಮತ್ತು ( ಆಸೈನ್ಯವು ) ತಮ್ಮತಮ್ಮ ಬೇರೆಬೇರೆ ಶಸ್ತ್ರಾಸ್ತ್ರಗಳನ್ನು ವೇಗದಿಂದ ತಿರುವುತ್ತ ಕೂಡಲೆ ಆಹುಡುಗನನ್ನು ಸುತ್ತುಗಟ್ಟಿತು ಶೂರನಾದ ಕುಶನು ತನ್ನಹತ್ತರದಲ್ಲಿದ್ದ ಕಾಲಾಳು ಆನೆ ರಥ ಕುದುರೆ ಗಳನ್ನು ಸಂಹರಿಸಿ ಆ ಸೇನಾಪತಿಯನ್ನು ಯಮುಸದನಕ್ಕಟ್ಟಿದನು



**ಕ. ಶ.** ನಿರೂಪ - ಅಪ್ಪಣೆ, ಬಳಸಿದುದು - ಸುತ್ತುಗಟ್ಟಿತು, ಜಳಪಿಸುತ – –ಹೊಯಿದಾಡಿಸುತ್ತ ( ತಿರುವುತ್ತ ) ಒಹಿಲದಿಂದ – ವೇಗದಿಂದ, ಅಳವಿಯೊಳ್ – ಹತ್ತರದಲ್ಲಿ, ( ಸುತ್ತಲು ) ತೀವಿದ – ಪಸರಿಸಿದ, ಕೊಳಗುಳ - ಯುದ್ಧ, ಅನಿತುವಂ – – ಅಷ್ಟೆಲ್ಲವನ್ನು, ಸವರಿ – ನಾಶಮಾಡಿ ( ಸಂಹರಸಿ ) ಜವಪೊಳಲ್ – ಯಮುಸದನ

ಆದಳಪತಿಯ ತಮ್ಮಸೋರ್ವ ನಗನೆಂಬವಂ |
ಕಾದಿ ಮಡಿದಣ್ಣನಂ ಕಾಣುತ್ತೆ ಖತಿಯಿಂ ಮ |
ಹಾದಂತಿಯುಂ ಕುಶನ ಮೇಲೆಯುಂಕುಶದಿಂದಿರಿದು ನೂಕಿದಂ ಕುಶಲದ ||
ಜೋದಗಾಳೆಗದಿಂದೆ ಬಳಿಕೆರಡುಸೀಳಾಗಿ |
ಮೇದಿನಿಗೆ ಬೀಳ್ವಂ ತಿಭವ ನೆಜ್ಜವನ ಧನು |
ಶ್ಛೇದಮಂ ಮಾಡಲಾತಂ ಪಲಗೆ ಕಡುಗಮಂ ಕೊಂಡವಂಗಿದಿರಾದನು ‖ ೨೭ ‖

ಭಾವಾರ್ಥ:— ಆ ಸೇನಾಪತಿಗೆ ನಗನೆಂಬ ಒಬ್ಬ ತಮ್ಮನಿದ್ದನು ಆತನು ತನ್ನ ಅಣ್ಣನು ಮರಣ ಹೊಂದಿದ್ದನ್ನು ನೋಡಿ ಸಿಟ್ಟಿನಿಂದ ತಾನುಕುಳಿತ ಆನೆಯನ್ನು ಅಂಕುಶದಿಂದ ತಿವಿದು ಅದನ್ನು ಕುಶನಮೇಲೆ ಬಿಟ್ಟನು ( ನೂಕಿದನು ) ಆಗ ಕುಶನು ಯುದ್ಧಚಾತುರ್ಯದಿಂದ ಆ ಆನೆಯನ್ನು ತನ್ನ ಬಾಣದಿಂದ ಹೊಡೆದು ಎರಡು ತುಂಡಾಗಿ ನೆಲದಮೇಲೆ ಬಿಳುವಂತೆ ಮಾಡಿದನು, ಮತ್ತು ಅವನ ( ನಗನ ) ಬಿಲ್ಲನ್ನು ಕಡಿದು ಹಾಕಿದನು ಆಗ ಅವನು ಥಾಲು ಕತ್ತಿಗಳನ್ನು ತೆಗೆದುಕೊಂಡು ಮತ್ತೆ ಕುಶನಿಗೆ ಎದುರಾದನು.

**ಕ. ಶ.** ಖತಿ - ಸಿಟ್ಟು, ಜೋದ – ಶೂರ ಸೈನ್ಯಿಕ, ಇಭ - ಆನೆ, ಪಲಗೆ – – ಥಾಲು, ಕಡುಗ - ಖಡ್ಗ, ( ಕತ್ತಿ )

ಕಿತ್ತ ಡಾಯುಧದೊಳೈದುವನ ಘನಹಸ್ತ ಮಂ ।
ಕತ್ತರಿಸಲೆಡಗೈಯೊಳಂದುಗದೆಯಂ ಕೊಂಡು ।
ಮತ್ತೆ ಮೇಲ್ವಾಯ್ದೊಡಾಕರಮುಮಂ ಕಡಿಯೆ ಬಾಹುಗಳಿಂದೆ ಪೊಯ್ವೆನೆಂದು ॥
ಒತ್ತಿ ನಡೆತರಲೆರಡುತೋಳ್ಗಳಂ ಕೂರ್ಗಣೆಯೊ ।
ಳುತ್ತರಿಸೆಕಾಲ್ಗಳಿಂದೊದೆದು ಕೆಡಪುವ ಭರದೊ ।
ಳೆತ್ತಲಾ ತೊಡೆಗಳನವಂ ಬೇಗದಿಂದೆಯ್ದಿ ಕುಶನೆಚ್ಚು ತುಂಡಿಸಿದನು ॥ ೨೮ ॥

ಭಾವಾರ್ಥ:— ಖಡ್ಗದಿಂದ ಹೊಡೆಯಲಿಕ್ಕೆ ಬರುವ ನಗನ ಬಲಗೈಯನ್ನು ಕುಶನು ತನ್ನ ಬಾಣದಿಂದ ಕತ್ತರಿಸಿದನು ಅವನು ಎಡಗೈಯಲ್ಲಿಯ ಗಧೆಯಿಂದ ಹೊಡೆಯಲಿಕ್ಕೆ ಬರಲು ಆ ಕೈಯನ್ನುಸಹ ಖಂಡಿಸಿದನು ಆಗ ನಗನುತನ್ನ ಬಾಹುಗಳಿಂದ ಕುಶನಕೂಡ ಹೋರಾಡುವೆನೆಂದು ಅಬ್ಬರಿಸಿ ಏರಿ ಬರಲು ಕುಶನು ಹದನವಾದ ಬಾಣಗಳಿಂದ (ಅವನ) ಎರಡು ತೋಳುಗಳನ್ನು ಕತ್ತರಿಸಿ ಚಲ್ಲಿದನು ಕಡೆಗೆ ಕಾಲುಗಳಿಂದ ಕುಶನನ್ನು ಒದ್ದು ಕೆಡವಬೇಕೆಂದು ನಗನು ಬರಲು ಕುಶನು ಕೂಡಲೇ ಬಾಣವನ್ನು ಹೂಡಿ ಅವನ ತೊಡೆ ಮೊಣಕಾಲುಗಳನ್ನು ತುಂಡರಿಸಿದನು

**ಕ. ಶ.** ಕಿತ್ತಡಾಯುಧ - ಖಡ್ಗ, ಐದುವ - ಬರುತ್ತಿರುವ, ಮೇಲ್ವಾಯ್ದೊ- - ಮೇಲೆಬಿದ್ದು, ಕೂರ - ಹದನವಾದ, ಕಣೆ - ಬಾಣ, ಉತ್ತರಿಸಲು - ಕತ್ತರಿಸಲು, ಜಾನು - ಮೊಣಕಾಲು.

ಬಾಹುಯುಗಮೂರುದ್ವಯಂ ಪೋದಕಾಯದಿಂ ।
ಸಾಹಸಂಗೈದವಂ ಮೇಲ್ವಾಯ್ದು ಚಂದ್ರಂಗೆ ।
ರಾಹುವಂಗೈಸುವಂತುರವಣಿಸೆ ಕುಶನಳುಕದೆಚ್ಚವನತಲೆಯನರಿಯೆ ॥
ಮಾಹೇಶ್ವರಾಭರಣದೋಳ್ಮೆರೆದುದಾಶಿರಂ ।
ಕಾಹುರದ ಕುವರನದಟಂ ಕಂಡು ಖಾತಿಯಿಂ ।
ದಾಹವಕೆ ಬಿಲ್ದುಡುಕಿ ತರಳನಂ ಕೆಣಕಿದಂ ಬಂದು ಕಲಿ ಶತ್ರುಘ್ನನು ॥ ೨೯ ॥

ಭಾವಾರ್ಥ:— ಎರಡು ತೋಳುಗಳೂ ಎರಡು ತೊಡೆಗಳು ಇಲ್ಲದ ದೇಹದಿಂದ ಆ ನಗನು ಸಾಹಸದಿಂದ ರಾಹುವು ಚಂದ್ರನನ್ನು ಮುಸುಕುವಂತೆ ಕುಶನ ಮೇಲೆ ಏರಿಬರಲು ಕುಶನು (ಬಾಣದಿಂದ) ಹೊಡೆದು ಅವನ ತಲೆಯನ್ನು ಹಾರಿಸಿದನು ಆಗ ಆ ತಲೆಯು ರುದ್ರದೇವನ ರುಂಡಮಾಲೆಯ ರುಂಡದಂತೆ ಶೋಭಿಸಿತು ಆಗ್ಗ ಅತೀ ಕೋಪಗೊಂಡ ಆ ಹುಡುಗನ ದಿಟ್ಟತನವನ್ನು ನೋಡಿ ತ್ವೇಷದಿಂದ ಬಿಲ್ಲನ್ನು ತೆಗೆದುಕೊಂಡು ಆ ಶೂರನಾದ ಶತ್ರುಘ್ನನು ಯುದ್ಧಕ್ಕೆ ಬಂದು ಕುಶನನ್ನು ತಡವಿದನು.

**ಕ. ಶ.** ಯುಗ - ಜೊಡು, ಊರು - ತೊಡೆ, ಉರವಣಿಸಿ - ಅರ್ಭಟಿಸಿ, ಕಾಹುರ - ತ್ವೇಷ ಅದಟಂ - ಧಿಟ್ಟತನ, ಆಹವ - ಕಾಳಗ, ತುಡಕಿ - ಹಿಡಿದು, ಕಲಿ- ಶುರ (ವೀರ)

ಕಡುಮುಳಿದು ಶತ್ರುಘ್ನನೊಂಭತ್ತು ಬಾಣದಿಂ |
ಬಿಡದೆಚ್ಚೊಡಾಕುಶಂ ಕೋಪದಿಂದವನ ತೇ |
ರ್ಪುಡಿಯಾಗೆ ಸಾರಥಿರಥಾಶ್ವಂಗಳಡೆಗೆಡೆಯೆ ಬಿಲ್ಲುಡಿಯೆ ಪೇರುರದೊಳು ||
ನಿಡುಸರಲ್ಕೀಲಿಸಲ್ಕರೆದನಂಬುಗಳನೊಡ |
ನೊಡನೆ ಕೂರ್ಗಣೆಗಳಾರಂ ಮತ್ತೆ ವಕ್ಷದೊ |
ಳ್ತುಡಿಸಿದಂ ಕುಶನದರ ಘಾತಿಗೆ ವರೂಥದಿಂ ಭರತಾನುಜಂ ಬಿದ್ದನು || ೩೦ ||

ಭಾವಾರ್ಥ:— ಶತ್ರುಘ್ನನು ಬಹಳ ಸಿಟ್ಟಿನಿಂದ ಒಂಭತ್ತು ಬಾಣಗಳನ್ನು ಹೊಡೆಯಲಾಗಿ ಆ ಕುಶನು ಕೋಪದಿಂದ ಪ್ರತಿಯಾಗಿ ಬಾಣವನ್ನು ಬಿಡಲು ಶತ್ರುಘ್ನನ ರಥವು ಮುರಿದು ಪುಡಿಪುಡಿಯಾಯಿತು ಸಾರಥಿಯು ಬಿದ್ದನು ರಥದ ಕುದುರೆಗಳು ಓಡಿದವು ಮತ್ತು ಅವನ ವಿಶಾಲವಾದ ಎದೆಯಮೇಲೆ ಬಿಲ್ಲು ಮುರೆಯಿತು. ಬಾಣಗಳುನಟ್ಟವು. ಕೂಡಲೇ ಕುಶನು ಮತ್ತೆ ಬಾಣಗಳನ್ನು ಹೂಡಿ ಆ ಬಾಣಗಳ ಹಾರವನ್ನು ಶತ್ರುಘ್ನನ ಎದೆಗೆ ಬಿಟ್ಟನು ಅವುಗಳ ಹೊಡತಕ್ಕೆ ಶತ್ರುಘ್ನನು ನೆಲಕ್ಕೆ ಬಿದ್ದನು.

**ಕ. ಶ.** ಅಡೆಗೆಡೆ - ಬೀಳು ( ಚೆದರು ) ಉಡಿ - ಮುರಿ, ಪೇರ್ - ವಿಶಾಲವಾದ, ಉರ - ಎದೆ, ನಿಡುಸರಲ್ - ಉದ್ದವಾದ ಬಾಣ, ಕೀಲಿಸಲ್ - ನಟ್ಟಿರಲು, ಆರ್ - ಹಾರ, ಘಾತಿ - ಪೆಟ್ಟು, ವರೂಥ - ರಥ.

ಗಿರಿತಟದೊಳೊಂದೊಂದರೊಳ್ಪೆಣಗಿ ಸೋಲ್ತಮದ |
ಕರಿ ಧರೆಗುರುಳ್ವಂತೆ ಪೂರಾಯ ಗಾಯದಿಂ |
ದಿರದೆ ಶತ್ರುಘ್ನಂ ಮಹೀತಳಕ ರಥದಿಂದೆ ಬೀಳ್ವಸಿತರೋಳ್ಪಡೆಯೊಳು ||
ದೊರೆದೊರೆಗಳೆಲ್ಲರುಂ ಕೈಕೊಂಡು ಕಾದಿ ಸಂ |
ಗರದೋಳ್ಪತಿತರಾದ ರಾಕುಶನ ಬಾಣದಿಂ |
ಪಿರಿದು ಕನ್ಯಾವಿಕ್ರಯಂಗೈದು ಜೀವಿಸುವ ಮಾನವನ ಪಿತೃಗಳಂತೆ || ೩೧ ||

ಭಾವಾರ್ಥ:— ಪರ್ವತದ ಓರೆಯಲ್ಲಿ ವಂದಕ್ಕೊಂದು ಕಾದಾಡಿ ಸೋತ ಮದವೇರಿದ ಆನೆಯು ಭೂಮಿಗೆ ಉರುಳುವಹಾಗೆ ಸಂಪೂರ್ಣವಾಗಿ ಘಾಯಪಟ್ಟ ಶತ್ರುಘ್ನನು ರಥದಲ್ಲಿ ತಡೆಯಲಾರದೆ ನೆಲಕ್ಕೆ ಉರಳಿದನು ಆ ಮೇಲೆ ಸೇನೆಯಲ್ಲಿದ್ದ ರಾಜಾಧಿರಾಜರೆಲ್ಲರೂ ಕುಶನಕೂಡ ಪರಾಕ್ರಮದಿಂದ ಹೋರಾಡಿ ಅವನ ಬಾಣಗಳ ಹೊಡತದಿಂದ ತನ್ನ ಹೆಣ್ಣುಮಕ್ಕಳನ್ನು ಮಾರಿಕೊಂಡು ಜೀವಿಸುವಂಥ ಮನುಷ್ಯನು ಹೇಗೆ ಪತೀತ ನಾಗುವನೋ ( ನರಕದಲ್ಲಿಬೀಳುವನೋ ) ಹಾಗೆಯೇ ಪತೀತರಾದರು ( ಸತ್ತುಬಿದ್ದರು )

**ಕ. ಶ.** ತಟ - ಇಳಕಲು ( ಓರೆ ) ಪೆಣಗಿ - ಹೋರಾಡಿ ( ಕಾದಾಡಿ ) ಮದಕರಿ - ಮದ್ದಾನೆ, ಕೈಕೊಂಡು - ಎದುರಾಗಿನಿಂತು.

ಬಹುದುರಿತಮುಂ ಸ್ವಧರ್ಮದೊಳೆತರಸುವಂತೆ ಕುಶ |
ನಹಿತರಂ ತನ್ನ ಭುಜಬಲದಿಂದೆ ಸವರಿದಂ |

ಸಹಜಾತರಿರ್ವರುಂ ಕೂಡಿದರ್ಪವನ ಹುತ |
ವಹರಂತೆ ಮತ್ತೆ ಹಯಮುಂ ಕಟ್ಟಿಕೊಂಡು ವಿ |
ಗ್ರಹಕೆ ನಿಲಲರಸನಲ್ಲಿಗೆ ದೂತರಂ ಕಳುಹಿದರ್ಬಲದೊಳುಳಿದಭಟರು || ೩೨ ||

ಭಾವಾರ್ಥ:— ಘೋರಪಾಪವನ್ನು ಧರ್ಮಕಾರ್ಯಗಳು ಹೋಗಲಾಡಿಸು ವಂತೆ ಕುಶನು ತನ್ನ ಬಾಹುಬಲದಿಂದ ವೈರಿಗಳನ್ನು ಸಂಹರಿಸಿದನು. ಆಮೇಲೆ ಘೋರ ಸಂಗ್ರಾಮದಿಂದ ಉಂಟಾದ ಮೂರ್ಛೆಯಿಂದ ಎಚ್ಚರಾಗಿ ಲವನು ತನ್ನ ಅಣ್ಣನಾದ ಕು ಶನನ್ನು ನೋಡಿದನು ಈ ಅವಳೀ ಜವಳೀ ಹುಟ್ಟಿದ ಅಣ್ಣ ತಮ್ಮಂದಿರಿಬ್ಬರು ಗಾಳಿ ಬೆಂಕಿಯಂತೆ ಕೂಡಿ ( ಸಹಾಯಕರಾಗಿ ) ಮತ್ತೆ ಆ ಕುದರೆಯನ್ನು ಕಟ್ಟಿಕೊಂಡು ಯುದ್ಧಕ್ಕೆ ನಿಲ್ಲಲು ಸೈನ್ಯದಲ್ಲಿಯ ಉಳಿದ ವೀರರು ತಮ್ಮ ರಾಜನಾದ ಶ್ರೀ ರಾಮ ಚಂದ್ರನ ಬಳಿಗೆ ಸೇವಕರನ್ನು ಕಳುಹಿದರು.

**ಕ. ಶ.** ವರಸು - ಹೋಗಲಾಡಿಸು, ಅಳಿದು - ಹೋಗಿ, ಸಹಜಾತರ್ - ವ- - ಡಹುಟ್ಟಿದವರು, ಹುತಹವ - ಬೆಂಕಿ, ವಿಗ್ರಹ - ಕಾಳಗ ( ಯುದ್ಧ )

ಚರು ಪುರೋಡಾಶ ತಂಡುಲ ತಿಲ ವ್ರೀಹಿ ಘೃತ |
ದುರು ಹವಿರ್ಧೂಮದಿಂದರುಣಲೋಚನನಾಗಿ |
ಪರಿಮೇಖಲಾ ಶ್ರಂಗ ಮೃಗಚರ್ಮಧರನಾಗಿ ನವನೀತಲಿಪ್ತನಾಗಿ ||
ಪರಮಮುನಿಗಳ್ವೆರಸಿ ಕನಕ ಜಾನಕಿಸಹಿತ |
ಭರತಲಕ್ಷ್ಮಣರೊಡನೆ ಕೃತಯಜ್ಞ ಶಾಲೆಯೊ |
ಳ್ವರದೀಕ್ಷೆಯಿಂದೆ ಕುಳ್ಳಿರ್ದೆಸೆವ ರಾಮನಂ ಕಂಡು ಚರರಿಂತೆಂದರು || ೩೩ ||

ಭಾವಾರ್ಥ:— ಶ್ರೀ ರಾಮಚಂದ್ರನು ತನ್ನ ಯಜ್ಞಶಾಲೆಯಲ್ಲಿ ಕುಳಿತಿದ್ದನು. ಹತ್ತಿರ ಯಜ್ಞಪಾತ್ರೆಗಳು ಹಿಟ್ಟು ಹೊಳಿಗೆ ಅಕ್ಕಿ ಎಳ್ಳು ಭತ್ತ ತುಪ್ಪ ಮುಂತಾದ ಹೋ ಮದ್ರವ್ಯಗಳು ಇಡಲ್ಪಟ್ಟಿದ್ದವು ಹವಿಸ್ಸಿನ ಹೊಗೆಯಿಂದ ರಾಮನ ನೇತ್ರಗಳು ಕೆಂಪಾ ಗಿದ್ದವು ರಾಮನು ಯಜ್ಞ ದೀಕ್ಷೆಯನ್ನು ಹೊಂದಿ ಕೃಷ್ಣಾಜಿನ ಮೇಖಲಾ ಮೊದಲಾದ ವುಗಳನ್ನು ಧರಿಸಿದ್ದನು ಮೈಗೆ ಬೆಣ್ಣೆಯನ್ನು ಸವರಿಕೊಂಡಿದ್ದನು ಅವನ ಸುತ್ತಲೂ ಶ್ರೇ ಷ್ಠರಾದ ಋಷಿಗಳು ಕುಳಿತಿದ್ದರು ಹತ್ತರದಲ್ಲಿಯೇ ಸುವರ್ಣದಿಂದಮಾಡಿದ ಸೀತಾದೇ ವಿಯ ಪ್ರತಿಮೆ ಯಿತ್ತು ಇಂಥಹ ಯಜ್ಞ ಶಾಲೆಗೆ ದೂತರುಬಂದು ಈ ಪ್ರಕಾರ ನುಡಿದರು.

**ಕ. ಶ.** ಚರು – ಆಹುತಿಯ ಅನ್ನ, ಪುರೋಡಾಶ – ಅಕ್ಕೀಹಿಟ್ಟಿನಿಂದ ಮಾ ಡಿದಹೋಳಿಗೆ, ವ್ರಿಹಿ - ಭತ್ತ, ಉರುಹವಿ - ಶ್ರೇಷ್ಠವಾದ ಆಹುತಿಕೊಡತಕ್ಕ ದ್ರವ್ಯ, ಪರಿಮೇಖಲಾ – ಟೊಂಕದ ಸುತ್ತಲು ಕಟ್ಟುವ ಒಂದುತರದ ಹುಲ್ಲಿನ ಬಂಧನ, ಎಸೆವ – – ಶೋಭಿಸುವ, ಚರರು - ದೂತರು.

ಅವಧರಿಸು ಜೀಯ ನಿನ್ನಧ್ವರದ ಚಾರುಹಯ |
ಮುವನಿಯೊಳವಿಘ್ನದಿಂ ತಿರುಗಿಬಂದುದು ಬಳಿಕ |
ಲವನೆಂಬ ಬಾಲಕಂ ಕಟ್ಟಿದಂ ಕಡುಗಿದೊಡೆ ಬಲಮೆಲ್ಲಮಂ ಕೊಂದನು. || ೩೪ ||

ಬವರದೊಳ್ಶತ್ರುಘ್ನ ನಾತನಂ ಪಿಡಿದು ತರ ।
ಲವನ ಬಳಿವಿಡಿದೋರ್ವನೈತಂದು ನಿನ್ನನುಜ ।
ನವಗಡಿಸೆ ಕೆಡೆಯೆಚ್ಚು ಬೀಳ್ಚಿದಂ ಪೇಳಲಂಜುವೆನೆಂದು ಕೈಮುಗಿದರು ॥ ೩೪ ॥

ಭಾವಾರ್ಥ:— ಬಳಿಕ ದೂತರು ರಾಮನನ್ನು ಕುರಿತು ( ಅಂದದ್ದು ) ಜೀಯಾ ಚಿತ್ತೈಸು ನಿನ್ನ ಯಾಗದ ಸುಂದರವಾದ ಕುದುರೆಯು ಪೃಥ್ವಿಯ ಮೇಲೆ ನಿರ್ವಿಘ್ನದಿಂದ ಬರುತ್ತಿರಲು ಲವನೆಂಬಬಾಲಕನು ಆಕುದುರೆಯನ್ನು ಕಟ್ಟಿದನು ಸಾವುಕಾದಲಾಗಿ ನಮ್ಮ ಯಲ್ಲ ಸೈನ್ಯವನ್ನು ಕೊಂದುಹಾಕಿದನು ಕಡಿಗೆ ಶತ್ರುಘ್ನನು ಅವನನ್ನು ಹಿಡಿದು ತರಲಾಗಿ ಅವನ ( ಲವನ ) ಸಂಬಂಧಿಕನಾದ ಮತ್ತೊಬ್ಬನು ಸಂತಪ್ತನಾಗಿ ಬಂದು ನಿನ್ನ ತಮ್ಮನನ್ನು ಬಾಣಗಳಿಂದ ಹೊಡೆದು ನೆಲಕ್ಕೆ ಕೆಡವಿದನು ಇದನ್ನು ಹೇಳಲು ನಾವು ಅಂಜುವೆವು ಎಂದು ಆ ದೂತರು ಕೈಮುಗಿದರು

**ಕ. ಶ.** ಅವಧರಿಸು – ಕೇಳು, ಅಧ್ವರ - ಯಾಗ, ಚಾರು - ಸುಂದರವಾದ, ಕಡುಗಿದೊಡೆ – ಯುದ್ಧಮಾಡಲು, ಬವರ – ಯುದ್ಧ, ಬಳಿವಿಡಿದ - ಸಂಬಂಧಿಸಿದ, ಅವಗಡಿಸು – ಸಂತಪ್ತನಾಗು, ಕೆಡೆ – ಕೆಡವಲು, ಯಚ್ಚು – ಎಸೆದು,

ಕೇಳುತೆ ಕನಲ್ದಿಲವೊ ಶತ್ರುಘ್ನನಂ ಜಯಿಸು ।
ವಾಳುಂಟೆ ಲೋಕದೊಳ್ಪೋಗಿವರ್ಮರುಳರೆಂ ।
ದಾಳವಾಡಲಿ ಜೀಯ ನಿಮ್ಮಡಿಗಳಾಣೆ ಪುಸಿಯಲ್ಲೆಂದು ಮತ್ತೆಚರರು ॥
ಪೇಳಲ್ಕೆ ಬೆರಗಾಗಿ ಮರುಗಿ ಲವಣಾಸುರಂ ।
ಕಾಳಗದೊಳೀತನಿಂದಳಿದನಾ ಬಾಲಕರ ।
ತೋಳ ಬಲ್ಪೆಂತೊ ಲಕ್ಷ್ಮಣ ಸೇನೆಸಹಿತ ನಡೆಯೆಂದು ರಘುಪತಿ ನುಡಿದನು ॥ ೩೫ ॥

ಭಾವಾರ್ಥ:— ಇದನ್ನೆಲ್ಲ ಕೇಳಿ ರಾಮನು ಸಿಟ್ಟಿನಿಂದ ಹುಚ್ಚ ದೂತರೇ ಹೋಗಿರಿ ಪೃಥ್ವಿಯಲ್ಲಿ ಶತ್ರುಘ್ನನನ್ನು ಜಯಿಸುವರು ಯಾರಾದರು ಉಂಟೆ ಪ್ರಭೋ ನಿಮ್ಮ ಪಾದದ ಆಣೆ ಸುಳ್ಳಲ್ಲ ಎಂದು ಸೇವಕರು ನುಡಿದರು ಸೇವಕರ ಇಮಾತನ್ನು ಅತಃಕರುಣದಿಂದ ಕೇಳಿ ಆಶ್ಚರ್ಯಚಕಿತನಾಗಿ ಲವಣಾಸುರನಂತ ರಾಕ್ಷಸನನ್ನು ಕೊಂದ ಶತುಘ್ನನನ್ನು ನಾಶಮಾಡಿದ ಬಾಲಕರ ಬಾಹುಬಲವು ಯಂಥಾದಿರಬಹುದು. ಲಕ್ಷ್ಮಣನೇ ಸೈನ್ಯದೊಡನೇ ಸಾಗಿಹೋಗು ಎಂದು ರಾಮನು ಆಜ್ಞಾಪಿಸಿದನು.

**ಕ. ಶ.** ಕನಲ್ದು – ಸಿಟ್ಟಿಗೆದ್ದು, ಆಳವಾಡಲ್ – ಜರಿದುನುಡಿಯಲಾಗಿ, ಬಲ್ಪು - ಬಲವು

ಬಳಿಕ ರಾಘವನಂಘ್ರಿಗೆರಗಿ ಕಳುಹಿಸಿಕೊಂಡು ।
ತಳತಂತ್ರಸನ್ನಾಹದಿಂ ಕಾಲಜಿತುನೆಂಬ ।
ದಳಪತಿಸಹಿತ ಸುಮಿತ್ರಾತ್ಮಜಂ ನಗರಮಂ ಪೊರಮಟ್ಟು ನಡೆವ ಭರಕೆ ॥

ಇಳೆ ಸವೆದುದೇಳ್ವ ಕೆಂದೂಳ್ಗಳಿಂದಂಬರ |
ಸ್ಥಳವೈದದುತ್ಪತಾಕಾ ದ್ವಜಂಗಳ್ಗೆ ದಿ |
ಗ್ವಳಯವಿಂಬಿಲ್ಲ ಘೀಳಿಡುವ ವಾದ್ಯಧ್ವನಿಗೆ ಪೊಸತಿದೆಂಬಂತಾಗಲು ‖ ೩೬ ||

ಭಾವಾರ್ಥ:— ಆಮೇಲೆ ( ಲಕ್ಷ್ಮಣನು ) ರಾಮಚಂದ್ರನ ಚರಣಗಳಿಗೆ ಯೆ ರಗಿ ಅಪ್ಪಣೆಯನ್ನು ಪಡೆದುಕೊಂಡು ಕಾಲಜಿತುವೆಂಬ ಸೇನಾಪತಿಯೊಡನೇ ಸೈನ್ಯ ಸಿದ್ಧ ಪಡಿಸಿಕೊಂಡು ಪಟ್ಟಣವನ್ನು ಬಿಟ್ಟು ಯುದ್ಧಕ್ಕೆ ಹೊರಟನು ಸೈನ್ಯವು ನಡೆಯುವ ಭಾ ರಕ್ಕೆ ಭೂಮಿಯು ಸವಿಯು ಹತ್ತಿತು? ಕೆಂಧೂಳಿಯು ಮುಸಕಿತು. ಮತ್ತು ಧ್ವಜ, ಪ ತಾಕ, ಸಣ್ಣ ನಿಶಾನಿಗಳಿಗೆ ಆಕಾಶದಲ್ಲಿ, ಸ್ಥಳವಿಲ್ಲದಾಯಿತು, ಭೋರ್ಗರೆಯುತ್ತಿರುವ, ಶಂಖ, ಭೇರಿ, ನಗಾರಿ, ನೌಬತ್ತು, ಮುಂತಾದ ವಾಧ್ಯದ ಧ್ವನಿಗಳಿಗೆ, ದಿಕ್ಕುಗಳು ಸಾ ಲದಾದವು.

**ಕ. ಶ.** ಸನ್ನಾಹ - ಸಿದ್ಧತೆ, ಪೊರಮಟ್ಟು – ಹೊರಟು, ಉತ್ಪತಾಕ – ಎ ತ್ತರವಾದ ಪತಾಕಿಗಳು, ಘೀಳಿಡು - ಭೋರ್ಗರೆ.

ಪೊಡವಿಯುಗಲದೊಳ್ಳೈದುವಾನೆಗಳ ಸೇನೆಗಳ
ಕಡುಗಿ ಮುಂಬರಿವ ರಥರಾಜಿಗಳ ತೇಜಿಗಳ |
ಬಿಡದೆ ಗಗನದೊಳಿಡಿದ ಸತ್ತಿಗೆಯ ಮುತ್ತಿಗೆಯ ಢಾಳಿಸುವ ಚಮರಂಗಳ ||
ನಿಡುಪತಾಕೆಯ ವಿವಿಧ ಧಾತುಗಳ ಕೇತುಗಳ |
ಜಡಿವ ಕೈದುಗಳ ಪ್ರೊಸರೋಚಿಗಳ ವೀಚಿಗಳ |
ಪೊಡೆವ ತಂಬಟ ಪಟಹ ಭೇರಿಗಳ ಭೂರಿಗಳ ಪದಪಿಂದೆ ಪಡೆ ನಡೆದುದು ‖ ೩೭ ‖

ಭಾವಾರ್ಥ:— ಲಕ್ಷ್ಮಣ ಆ ಸೈನ್ಯವು ಒಳ್ಳೇಸಡಗರದಿಂದ ನಡೆದಿತ್ತು. ಆನೆಗ ಳಸಾಲುಗಳು ಭೂಮಿಯು ಹಿಡಿಸಲಾರದೆಹೊರಟಿದ್ದವು.ಅವಸರದಿಂದ ರಥಗಳು ಕುದುರೆ ಗಳು ಮುಂದೆಮುಂದೆ ಬರುತ್ತಿದ್ದವು, ಮೇಲೆಹಿಡಿದ ಚತ್ತರಿಗೆಗಳ ಸಮೂಹವು ಮತ್ತು ಅತ್ತಿತ್ತ ಬೀಸಲ್‌ಪಡುವ ಚವರಿಗಳು ಕಂಗೊಳಿಸುತಿದ್ದವು, ಎತ್ತರವಾದ ಧ್ವಜಗಳು ಎದ್ದುಕಾಣುತ್ತಿದ್ದವು ವೀರರು ಕೈಯಲ್ಲಿ ಹಿಡಿದು ಝಳಿಪಿಸುತ್ತಿರುವ ಆಯುಧಗಳು ತ ಮ್ಮ ಕಿರಣಗಳನ್ನು ಪಸರಿಸಿ ಲಕಲಕಿಸುತ್ತಿದ್ದವು ಮತ್ತು ಅನೇಕತರಹದ ನಗಾರಿ ನೌಬ ತ್ತು ಹಲಗೆ ಕಾಳೆ ಮುಂತಾದ ವಾದ್ದೆಗಳು ಭೋರ್ಗರೆಯುತ್ತಿದ್ದವು.

**ಕ. ಶ.** ಕಡಗಿ - ಅತಿಯಾಗಿ, ಮುಂಬರಿವ – ಮುಂದಕ್ಕೆ ಹರಿಯುವ ರಾಜಿ - ಸಾಲು, ತೇಜಿ – ಕುದುರೆ, ಇಡಿದ – ತುಂಬಿದ, ಸತ್ತಿಗೆ – ಚತ್ರಿಗಿ, ಢಾಳಿಸು – ಅತ್ತಿತ್ತ ಬೀಸು, ನಿಡು - ಎತ್ತರವಾದ, ಕೇತು – ಸಣ್ಣಧ್ವಜ, ಕೈದು - ಆಯುಧ, ರೋಚಿ - ಜಿಳಕು, ವೀಚಿ - ಸಮೂಹ, ತಂಮಟ - ಹಲಿಗೆ, ಪಟಹ - ಢಕ್ಕೆ, ಭೂರಿ – ಬಹಳ, ಪದಪು - ಅರ್ಭಟ.

ಪ್ರಾಣಮಿಲ್ಲದೆ ಚೇತರಸಿಕೊಳಲ್ತನುವಿನೊ '
ಳ್ತ್ರಾಣಮಿಲ್ಲದೆ ನೊಂದು ಗಾಯದಿಂ ಮರವೆಯಂ ।
ಕೇಣಿಗೊಂಡೊರಗಿ ಶತ್ರುಘ್ನನಳಿದುಳಿದ ಬಲದೊಡನೆ ರಾಹುಗ್ರಸ್ತದ ॥
ಏಣಧರನಂತಿರಲ್ಪಡೆಸಹಿತ ಲಕ್ಷ್ಮಣಂ ।
ಕ್ಷೋಣಿಪತಿ ಕೇಳ್ಬಂದು ಕಂಡು ಸೈಪಿಟ್ಟಿನ್ನು ।
ಕಾಣಬಹುದೆನುತೆ ಕೈವೀಸಿದಂ ಕಾಲಜಿನ್ಮುಖ್ಯಸೇನಾನಿಗಳ್ಗೆ ॥ ೩೮ ॥

ಭಾವಾರ್ಥ:— ಶತ್ರುಘ್ನನು ಘಾಯದಿಂದ ನೊಂದು ಮುರ್ಛೆಹೊಂದಿ ಪ್ರಾಣ ವಿಲ್ಲದೆ ಎಚ್ಚರಗೊಳ್ಳಲಿಕ್ಕೆ ದೇಹದಲ್ಲಿ ತ್ರಾಣಸಹ ಇಲ್ಲದೆ ವುಳಿದ ತನ್ನ ಸೈನ್ಯದೊಂದಿಗೆ ರಣಾಂಗಣದಲ್ಲಿ ಮಲಗಿರಲು ರಾಹು ಗ್ರಸ್ತಚಂದ್ರನಂತೆ ಕಾಣುತ್ತಿದ್ದನು ಆಗ್ಗೆ ಲಕ್ಷ್ಮಣನು ಸೇನೆ ಸಹಿತ ಅಲ್ಲಿಗೆ ಬಂದನು. ಜನಮೇಜಯನೇ. ಶತ್ರುಘ್ನನ ಪರಾಮರಿಕೆ ಮಾಡಿ ಮುಂದಿನ ಯುದ್ಧವನ್ನು ನೋಡಬಹುದೆಂದು ಕಾಲಜೀತು ಮೊದಲಾದ ತನ್ನ ಸೇನಾಪತಿಗಳಿಗೆ ಯುದ್ಧವನ್ನು ಪ್ರಾರಂಬಿಸಲಿಕ್ಕೆ ಕೈಬೀಸಿ ಸಂಜ್ಞೆ ಮಾಡಿದನು.

**ಕ. ಶ.** ಚೇತರಿಸಿಕೊಳ್ಳು - ಎಚ್ಚರಾಗು ಮರವೆ - ಮುರ್ಛೆ ಕೇಣಗೊಂಡು- – ಎಚ್ಚರತಪ್ಪಿ, ಏಣಧರ - ಚಂದ್ರ, ಸೈಪಿಟ್ಟು – ಸಮಾಧಾನಮಾಡಿ.

ಕಂಡರೀಜೆಯೊಳರಿಬಲವ್ಯೂಹಮಂ ಬರಲಿ ।
ಖಂಡಿಸುವೆನೆಂದೊರ್ವರೊರ್ವರೊಳ್ಮಾತಾಡಿ ।
ಕೊಂಡರವರೊಳ್ತನ್ನ ಬಿಲ್ಮುರಿದುದಾಹವದೊಳೆಂದು ಲವನಗ್ರಜಂಗೆ ॥
ಚಂಡಮುನಿಪತಿ ಮಾಡಿದುಪದೇಶದಿಂದೆ ಕೋ
ದಂಡಮಂ ಪಡೆವೆನೀಕ್ಷಣದೊಳೆಂದೊರೆದು ರವಿ ।
ಮಂಡಲವನೀಕ್ಷಿಸುತೆ ತರಣಿಯಂ ಪ್ರಾರ್ಥಿಸಿದ ನನುಪಮ ಸ್ತುತಿಗಳಿಂದೆ ॥ ೩೯ ॥

ಭಾವಾರ್ಥ:— ಇತ್ತ ಲವಕಶರು ವೈರಿಗಳ ಸೈನ್ಯ ರಚನೆಯನ್ನು ನೋಡಿ. ಬಂದಾದರು ಒರಲಿ ಅವರನ್ನು ತುಂಡುತುಂಡಾಗಿ ಮಾಡುವೆವು ಎಂದು ನುಡಿದರು. ಲವನು ಕುಶನಿಗೆ ಯುದ್ಧದಲ್ಲಿ ನನ್ನ ಬಿಲ್ಲು ಮುರಿದಿದೆ ಆದುದರಿಂದ ಮಹಾ ತಪಸ್ವಿಯಾದ ವಾಲ್ಮಿಕಿಯ ಪ್ರಭಾವದಿಂದ ಈಗಲೇ ಮತ್ತೊಂದು ಅಮೌಲ್ಯವಾದ ಬಿಲ್ಲುಪಡೆಯುವೆನೆಂದು ಹೇಳಿ ಸೂರ್ಯಮಂಡಲವನ್ನು ನೋಡಿ ಶ್ರೇಷ್ಠವಾದ ಸ್ತೋತ್ರಗಳಿಂದ ಸೂರ್ಯನನ್ನು ಪ್ರಾರ್ಥಿಸಿದನು.

**ಕ. ಶ.** ಕೋದಂಡ – ಬಿಲ್ಲು, ಒರೆದು – ನುಡಿದು, ತರಣಿ – ಸೂರ್ಯ, ಅನುಪಮ – ಶ್ರೇಷ್ಠವಾದ.

ಮಿತ್ರಾಯ ಸೂರ್ಯಾಯ ಹಂಸಾಯ ಪೂಷ್ಣೇ ಚ ।
ವಿಶ್ವ ಜಗಚ್ಚಕ್ಷುಷೇ ಚಂಡಘೃಣಯೇ ಚ ।
ಚಿತ್ರಾಯ ಪಿಂಗಾಯ ಪುರುಷಾಯ ಭಾನವೇ ಜ್ಯೋತಿಷೇ ಭಾಸ್ಕರಾಯ ॥

ಸತ್ರೀಕರೂಪಾಯ ವಿಮಲಾಯ ವಿಶ್ವರ |
ಕ್ಷಿತ್ರೀ ಸಹಸ್ರಕಿರಣಾಯ ರವಯೇ ಮಂದ |
ಪಿತ್ರೇದಿವಾಕರಾಯ ಬ್ರಹ್ಮ ವಿಷ್ಣು ರುದ್ರಾತ್ಮನೇ ತುಂಭ್ಯಂ ನಮಃ || ೪೦ ||

## ಭಾವಾರ್ಥ. ಮತ್ತು ಕ. ಶ. ಅ.

ಸ್ಥಾವರ ಜಂಗಮಾತ್ಮಕ ವಸ್ತುಗಳಲ್ಲಿ ಸ್ನೇಹವನ್ನು ಮಾಡುವವನಾದಂಥ ( ಮಿತ್ರ ) ಪ್ರಾಣಿಗಳನ್ನು ಅವರವರವ್ಯಾಪಾರಗಳಲ್ಲಿ ಪ್ರೇರಿಸುವವನಾದಂಥ ಸೂರ್ಯಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವಂಥ ( ಹಂಸ ) ಸಕಲ ಪ್ರಾಣಿಸಮುಹಕ್ಕೆ ಪುಷ್ಟಿಪ್ರದಾಯಕನಾದಂಥ ( ಪೂಷನ್ ) ಮಲಗಿದವರನ್ನು ಎಚ್ಚರಿಸುವವನಾದಂಥ (ಸವಿತ್ರ ) ಪ್ರಪಂಚಕ್ಕೆ ಕಣ್ಣಿನಂತೆ ವಸ್ತುಪ್ರಕಾಶಕನಾದಂಥ ( ಜಗಚ್ಚಕ್ಷುಃ ) ತೀಕ್ಷ್ಣಕಿರಣಗಳುಳ್ಳಂಥ ( ಚಂಡಘೃಣಿ ) ಪರಿಶುದ್ಧ ನಾದಂಥ ( ಪವಿತ್ರ ) ಪಿಂಗಲವರ್ಣ ನಾವಂಥ ( ಪಿಂಗ ) ಪುರುಷಶಬ್ದವಾಚ್ಯನಾದಂಥ ( ಪುರುಷ ) ಕಿರಣಸ್ವರೂಪನಾದಂಥ (ಭಾನು) ತೇಜೋರೂಪನಾದಂಥ ( ಜ್ಯೋತಿಃ ) ಕಾಂತಿಯನ್ನುಂಟುಮಾಡುವವನಾದಂಥ ( ಭಾಸ್ಕರ ) ಯಜ್ಞಸ್ವರೂಪನಾದಂಥ ( ಸತ್ರೈಕರೂಪ ) ಜಗತ್ಪಾಲಕನಾದಂಥ ( ವಿಶ್ವರಕ್ಷಿತ್ರ ) ಪಾಪರಹಿತನಾದಂಥ ( ವಿಮಲ ) ಸಾವಿರಕಿರಣಗಳುಳ್ಳವನಾದಂಥ ( ಸಹಸ್ರಕಿರಣ ) ಸರ್ವದೇವಾಸುರರಿಂದ ಸ್ತೊತ್ರಮಾಡಲ್ಪಟ್ಟಂಥ ( ರವಿ ) ಶನಿಗೆ ತಂದೆಯಾದಂಥ ( ಮಂದಪಿತೃ ) ದಿವಸವನ್ನು ಮಾಡುವಂಥ ( ದಿವಾಕರ ) ತ್ರಿಮೂರ್ತ್ಯಾತ್ಮಕನಾದಂಥ ( ಬ್ರಹ್ಮ ವಿಷ್ಣು ರುದ್ರಾತ್ಮ ) ಹೇಸೂರ್ಯನಾರಾಯಣನೇ ನಿನಗೆ ನಮಸ್ಕಾರವು.

ಜಗಕೆ ನಿನೊಂದುಕಣ್ಣಾಗಿರ್ಪೆ ಮೇಣೆರಡು |
ಬಗೆಯು ಪಥದೊಳ್ನಡೆವೆ ತಿಳಿಯಲ್ಕೆ ಮೂರುಮೂ |
ರ್ತಿಗಳನೊಳಕೊಂಡಿರ್ಪೆ ಸಲೆ ಸಂದನಾಲ್ಕುವೇದಂಗಳೊಡಲಾಗಿ ತೋರ್ಪೆ ||
ಅಗಲದೈದಂಗದೊಳ್ಕಾಣಿಸುವೆ ಪರಿಪರಿಯೊ |
ಳೊಗೆದಾರುಋತುಗಳೊಳ್ವರ್ತಿಸುವೆ ಸಂತತಂ |
ಗಗನಕೇಳಶ್ವಮಂ ಕೊಂಡೇಳ್ವೆ ದೇವ ಬಿಲ್ಗೊಟ್ಟು ಕಳುಹಬೇಕೆಂದನು || ೪೧ ||

ಭಾವಾರ್ಥ:— ( ಸೂರ್ಯನಾರಾಯಣನೆ ) ಸಮಸ್ತ ಜಗಕೆಲ್ಲ ನೀನೇ ಒಂದು ಕಣ್ಣಾಗಿರುವಿ ಮತ್ತ ಎರಡು ಮಾರ್ಗವಾಗಿ ( ಉತ್ತರಾಯಣ–ದಕ್ಷಿಣಾಯನ ) ಆಕಾಶದಲ್ಲಿ ಸಂಚರಿಸುವಿ. ವಿಚಾರಮಾಡಿ ನೋಡಲಾಗಿ ನೀನು ತ್ರಿಮೂರ್ತಿ ( ಬ್ರಹ್ಮ ವಿಷ್ಣುಮಹೇಸ್ವರ ) ಸ್ವರೂಪನಾಗಿರುವಿ ನಾಲ್ಕು ವೇದಗಳು ನಿನ್ನ ಶರೀರವಾಗಿರುವವು ಮತ್ತು ಅವುಗಳ ಅಂಗಗಳಲ್ಲಿಯುಸಹ ನೀ ನಿರುವಿ ಆರೂಋತುಗಳಲ್ಲಿ ನೀನು ಎಡಬಿಡದೆ ಪಾರಿಯನ್ನು ನಡೆಯುತ್ತಿರುವಿ ಮತ್ತು ಯಾವಾಗಲೂ ನೀನು ಏಳು ಕುದುರೆಗಳನ್ನು ಹೂಡಿಕೊಂಡು ಬರುವಿ ಇಂಥ ಪ್ರಭಾವ ಶಾಲಿಯಾದ ಸೂರ್ಯನಾರಾಯಣನೇ ನನಗೊಂದು ಬಿಲ್ಲನ್ನು ಕೊಟ್ಟು ರಕ್ಷಿಸು ಎಂದನು.

**ಕ. ಶ.** ಪರಿಪರಿಯೊಳ್ಒಗೆದ - ಬೇರೆಬೇರೆಯಾಗಿಹುಟ್ಟಿದ, ಸಂದ - ಪ್ರಸಿದ್ಧವಾದ.

ಪತ್ತು ದೆಶೆಯಂ ಬೆಳಗಿಸುವೆ ಪನ್ನೆರಡು ರಾಶಿ |
ಗೊತ್ತಾಸೆಯಾಗಿರ್ಪೆ ಶತಪತ್ರಮಿತ್ರನಹೆ |
ಮತ್ತೆಸಾಸಿರಕಿರಣದಿಂದೆಸೆವೆ ಲಕ್ಷಯೋಜನದಳತೆಯೊಳ್ತೊಳಗುವೆ ||
ಬಿತ್ತರದನಂತದೊಳ್ಸಂಚರಿಪೆ ದೇವ ನಿ |
ನ್ನುತ್ತಮಗುಣಾವಳಿಯನೆಣಿಸಲೆನ್ನಳವೆ ಬಿ |
ಲ್ಲಿತ್ತು ಕಳುಹಬೇಕೆಂದು ದಿನಮಣಿಯನಾ ಲವಂ ನುತಿಸಿದಂ ಭಕ್ತಿಯಿಂದೆ || ೪೨||

ಭಾವಾರ್ಥ:— ( ಸೂರ್ಯನಾರಾಯಣನೇ ? ) ಹತ್ತೂ ದಿಕ್ಕುಗಳನ್ನು ಪ್ರಕಾಶಗೊಳಿಸುವಿ, ಹನ್ನೆರಡು ರಾಸಿಗಳಿಗೂ ಸಹಾಯಕನಾಗಿರುವಿ, ನೀನು ಕಮಲ ಭಾಂದವನಾಗಿರುವಿ, ನಿನಗೆ ಸಹಸ್ರಕಿರಣನೆಂದು, ಕರೆಯುತ್ತಾರೆ. ಲಕ್ಷಯೋಜನದ ಅಳತೆಯಲ್ಲಿಯೂ, ನೀನು ಪ್ರಕಾಸಿಸುತ್ತಿರುವಿ. ಮತ್ತು ವಿಸ್ತಾರವಾದ ಆಕಾಶ ಮಾರ್ಗದಲ್ಲಿ, ನೀನು ಸಂಚಾರಮಾಡುವಿ. ದೇವನೇ ಈ ನಿನ್ನ ಅದ್ಭುತಗುಣಗಳನ್ನು ಎಣಿಸಲು ಸಾಧ್ಯವೇ ? ( ಹೀಗೆಂದು ) ದಯಮಾಡಿ ಬಿಲ್ಲುಕೊಟ್ಟು ನನ್ನುನ್ನುಕಾಪಾಡು ಎಂದು ಆ ಲವನು, ಸೂರ್ಯ ನಾರಾಯಣನನ್ನು ಭಕ್ತಿಯಿಂದ ಸ್ತುತಿಸಿದನು.

**ಕ. ಶ.** ಯೋಜನ – ಎಂಟು ಮೈಲ, ತೊಳಗುವೆ- ಪ್ರಕಾಶಿಸುವೆ, ಬಿತ್ತರ- ವಿಸ್ತಾರ, ಅಳವೆ - ಶಕ್ಯವೆ ( ಸಾಧ್ಯವೆ, )

ಅವನೀಶ ಕೇಳ್ಬಳಿಕ ಲವನ ವಿಮಲಸ್ತುತಿಗೆ |
ರವಿ ಮೆಚ್ಚಿ ಕೊಟ್ಟನಾತನ ಕೈಗೆ ದಿವ್ಯಚಾ |
ಪವನದಂ ಕೊಂಡಗ್ರಜಂಗೆ ತೋರಿಸಿ ಮುನಿಪ ವಾಲ್ಮೀಕಿ ಬಾಳುಗೆನುತೆ ||
ಪವಣಸಾರೈದು ಬಿಲ್ದಿರುವನೊದರಿಸಿದನು |
ತ್ಸವದಿಂದೆ ಕುಶನುಗ್ರ ಕೋದಂಡಮಂ ಪಿಡಿದ |
ನವರಿರ್ವರುಂ ಮತ್ತೆ ಪವನ ಪಾವಕರಂತೆ ಪೊಕ್ಕರರಿಬಲವನುರುಬಿ || ೪೩ ||

ಭಾವಾರ್ಥ:— ಜನಮೇಜಯರಾಜನೇ ! ಕೇಳು, ಆ ಮೇಲೆ ಸೂರ್ಯನು, ಲವನ ನಿರ್ಮಲವಾದ ಸ್ತುತಿಗೆ ಮೆಚ್ಚಿ, ದಿವ್ಯವಾದ ಒಂದು ಬಿಲ್ಲನ್ನು ಕೊಟ್ಟನು. ಅವನು ಅದನ್ನುತೆಗೆದುಕೊಂಡು ತನ್ನಅಂಣನಿಗೆ ತೋರಿಸಿ ವಾಲ್ಮೀಕಿಮುನಿಗೆ ಜಯವಾಗಲಿ. ಎಂದು ನುಡಿದು ಆ ( ಬಿಲ್ಲಿನ ) ಶಕ್ತಿಪ್ರಮಾಣವನ್ನು ತಿಳಿದು, ಹೆದೆಯನ್ನೇರಿಸಿ ಒಳ್ಳೇಶಡಗರದಿಂದ ಟಂಕಾರಧ್ವನಿಯನ್ನುಮಾಡಿದನು. ಕುಶನುಸಹ ತನ್ನ ಬಲಿಷ್ಟವಾದ ಬಿಲ್ಲನ್ನು ಹಿಡಿದನು. ಆಮೇಲೆ ಅವರಿಬ್ಬರೂ, ಘಾಳಿ ಬೆಂಕಿಗಳಂತೆ ಅರ್ಭಟಿಸಿ ಶತ್ರುಗಳ ಸೈನ್ಯವನ್ನುಹೊಕ್ಕರು.

**ಕ. ಶ.** ವಿಮಲ – ನಿರ್ಮಲ, ಬಾಳುಗೆ - ಜಯವಾಗಲಿ ( ಬದುಕಲಿ, )

ಪವಣ - ಪ್ರಮಾಣ, ಆರೈದು-ತಿಳಿದು, ಪಾವಕ - ಬೆಂಕಿ, ಉರುಬಿ - ಅರ್ಭಟಿಯಿಂದ.

ನೂರಾಳಿಗೊಂದು ಹಯವಿರುತಿರ್ಪ ದಾಹಯಂ ।
ನೂರಕಿರುತಿಹುದು ಮೇಣೊಂದುರಥ ಮಾರಥಂ ।
ನೂರಕೀಭವೊಂದಿರ್ಪುದಿಂತಿಭ ಸಹಸ್ರಮಿರೆ ಭ್ರಮಿಯೆಂದೆನಿಸಿಕೊಳ್ವದು ॥
ಮೀರಿ ಯೊಜನದಗಲದೊಳ್ಭ್ರಮಿಗಳೀರೈದು ।
ನೂರಿಟ್ಟಣಿಸಿ ನಡೆದು ಬಂದೊಡಾ ಸೇನೆಯಂ ।
ತಾರು ತಟ್ಟಾಗಿ ಕೆಡಹಿದರೊಂದುನಿಮಿಷದೊಳ್ಕುಶನ ಲವ ರದೇವೇಳ್ವೆನು ॥ ೪೪ ॥

ಭಾವಾರ್ಥ:— ( ಆ ಸೈನ್ಯದ ರಚನೆಯು ಹೇಗಿತ್ತೆಂದರೆ, ) ನೂರು ಕಾಲಾಳುಗಳಮೇಲೆ, ಒಬ್ಬ ಕುದುರೆಯಸ್ವಾರ ಇಂಥ ನೂರು ಸವಾರರಮೇಲೆ ಒಬ್ಬ ರಥಿಕನು, ನೂರು ರಥಿಕರಮೇಲೆ, ಒಬ್ಬ ಹಸ್ತಿಪನು, ಈ ಪ್ರಕಾರ ಒಂದು ಸಾವಿರ ಆನೆಯುಳ್ಳ ಸೇನೆಗೆ, ಭ್ರಮಿಯನ್ನುವರು. ನಾಲ್ಕು ಹರದಾರಿಯ ವರೆಗೆ ಪಸರಿಸಿದ, ಇಂಥ ಹತ್ತುನೂರು ಭ್ರಮೆಗಳುಳ್ಳ ಆ ಸೇನೆಯು ಅವರಮೇಲೆ ( ಲವಕುಶರ ) ಸಾಗಿಬರಲು, "ಲವ ಕುಶರು" ಆ ಸೇನೆಯನ್ನು ಒಂದೇಕ್ಷಣದಲ್ಲಿ ಸಂಪೂರ್ಣವಾಗಿ ನಾಶಮಾಡಿದರು. ಅದೆಲ್ಲವನ್ನು ವರ್ಣಿಸುವದು ಅಸಾಧ್ಯವು.

**ಕ. ಶ.** ಇಭ - ಆನೆ, ಭ್ರಮಿ - ಒಂದುಸಾವಿರ ಆನೆಯುಳ್ಳ ಸೇನೆಯು, ಇರ್ - ಎರಡು, ಈರೈದು - ಹತ್ತು, ಇಟ್ಟಣಿಸಿ - ಇಕ್ಕಟ್ಟಾಗಿ, ತಾರುತಟ್ಟಾಗಿ - ಸಂಪೂರ್ಣನಾಶವಾಗಿ.

ಹೂಣೆವೊಕ್ಕಿಸುತೆ ಬಾಲಕರೈದೆ ಲಕ್ಷ್ಮಣಂ ।
ಕಾಣು ತಿದಿರಾದಂ ಕುಶಂಗಖಿಳವಾಹಿನೀ ।
ಶ್ರೇಣಿಸಹಿತುರುಬಿದಂ ಕಾಲಜಿತುವಾ ಲವನ ಮೇಲೆ ವಡಬಾಗ್ನಿಯೆಡೆಗೆ ॥
ಮಾಣದೆರಗುವ ಕಡಲ ಜಲದಂತೆ ಕವಿಮುದು ಕೃ ।
ಪಾಣತೋಮರ ಪರಶು ಕುಂತ ಮುದ್ಗರ ಚಕ್ರ ।
ಬಾಣ ಶಕ್ತಿಗಳ ಘೋರಪ್ರಹಾರಂಗಳಿಂದಾ ಸಕಲಸೇನೆ ಮುಳಿದು ॥ ೪೫ ॥

ಭಾವಾರ್ಥ:— ಲವಕುಶರಿಬ್ಬರೂ ಆ ಸೈನ್ಯದಲ್ಲಿ ಒಳನುಗ್ಗಲು, ಲಕ್ಷ್ಮಣನು, ಕುಶನಿಗೆ ಎದುರಾದನು. ಕಾಲಜಿತವು ತನ್ನ ಸಮಸ್ತ ಸೈನ್ಯದೊಡನೆ, ಲವನಮೇಲೆ ಸಾಗಿಬಂದನು. ಅಗ್ನಿ ಕಾಡುಗಿಚ್ಚಿನಮೇಲೆ ಎಡಬಿಡದೆ ಬೀಳುವ ಸಮುದ್ರದ ನೀರಿನಂತೆ ಆ ಸೈನ್ಯವೆಲ್ಲ ಲವನನ್ನು ಮುತ್ತಿತು. ಸೈನಿಕರು ಕತ್ತಿ, ಡೊಂಣೆ, ಚಪಗೊಡಲಿ, ಭಲ್ಲೆ, ಗದೆ, ಚಕ್ರಾಯುಧ, ಕಠಾರಿ, ಮೊದಲಾದ ಆಯುಧಗಳಿಂದ ಯುಕ್ತರಾಗಿ, ಅತಿ ತ್ವೇಷದಿಂದ ಯುದ್ಧಮಾಡುತ್ತಿದ್ದರು.

**ಕ. ಶ.** ಹೊಣೆವೊಕ್ಕಿಸುತೆ - ಒಳನುಗ್ಗಿ, ವಾಹಿನಿ - ಸೈನ್ಯ. ಉರುಬಿದಂ-

ತ್ವೇಷತೆಂದ ಎದುರಾದನು.

ಏಸು ಭಟರಂಬುಗಳ ನಿಸುವರ್ರೈಸಂಬುಗಳ |
ನಾಸುಭಟರಂಗದೊಳ್ಕಾಣಿಸಿದನಾಬಲದೊ |
ಳೇಸು ಕೈದುಗಳೊಳೊದಗಿದರ್ರೈಸು ಕೈದುಗಳನೆಲ್ಲಮಂ ತಡೆಗಡಿದನು ||
ಏಸಾನೆಕುದುರೆಗಳ್ಕ ವಿದುವ್ರೈಸಂಸೀಳ್ದ |
ನೇಸು ತೇರುರವಣಿಸಿತ್ತೈಸುರಥಮಂ ಮುರಿದ |
ನೇಸುಮಂದಿ ಗಡುರುಬಿತ್ತೈಸುಮಂ ಕೊಂದನಿನ್ನೇನುಸಾಹಸಿಯೋ ಲವನು. || ೪೬ ||

ಭಾವಾರ್ಥ:— ಆ ವೀರರು ಎಷ್ಟುಬಾಣಗಳನ್ನು ಬಿಡುತ್ತಿದ್ದರೋ ಅಷ್ಟೇ ಬಾಣಗಳನ್ನು ಅವರಮೇಲೆ ಪ್ರತಿಯಾಗಿ ಬಿಡುತ್ತಿದ್ದನು. ಆ ಸೈನ್ಯದಲ್ಲಿ, ತನ್ನಮೇಲೆ ಎಷ್ಟು ಆಯುಧಗಳು ಬೀಳುತ್ತಿದ್ದವೋ ? ಅವುಗಳನ್ನೆಲ್ಲ ಅವನು, ತುಂಡರಿಸಿದನು. ತನ್ನ ಮೇಲೆ ಏರಿಬರುವ, ಆನೆ, ಕುದುರೆಗಳನ್ನೆಲ್ಲ ಸೀಳಿವಗಿದನು. ಎಷ್ಟುರಥಗಳು, ಅವನಮೇಲೆ ಏರಿಬರುತ್ತಿದ್ದವೊ ? ಅವನ್ನೆಲ್ಲವನ್ನು, ಬಹುಪರಾಕ್ರಮದಿಂದ ಮುರಿದನು. ಮತ್ತು ತನ್ನಮೇಲೆ ಸಾಗಿಬಂದು ಯುದ್ಧಮಾಡುವ, ಎಲ್ಲ ವೀರರನ್ನು ಕೊಂದುಹಾಕಿದನು. ಲವನು, ಎಷ್ಟು ಸಾಹಸಿಗನಾಗಿರಬಹುದು !

**ಕ. ಶ.** ಎಸುವರು – ಬಿಡುವರು, ಏಸು - ಎಷ್ಟು, ಕೈದು – ಆಯುಧ, ತಡೆಗಡೆ – ತುಂಡುಮಾಡು, ಅಭಟ – ಪರಾಕ್ರಮ.

ಜಾನಕಿಯ ಸುತನ ಬಾಣಾವಳಿಯ ಹಾವಳಿಯ |
ನೇನೆಂಬೆನಹಿತರಂ ಕವರಿದುವು ಸವರಿದುವು |
ಬಾನೆಡೆಯೊಳಿಟ್ಟಣಿಸಿ ಹಾರಿದುವು ತೂರಿದುವು ಕೊಂದುವರಿದುವು ಪರಿದುವು |
ಆನೆಕುದುರೆಗಳುನುರೆ ಸೀಳಿದುವು ತೂಳಿದುವು |
ನಾನಾಪ್ರಕಾರದಿಂ ಕೆಡಹಿದುವು ಕೊಡಹಿದುವು |
ಸೇನೆಗಳೊಡಲ್ಗಳಂ ಪಚ್ಚಿದುವು ಕೊಚ್ಚಿದುವು ತಲೆಗಳಂ ತತ್ಕ್ಷಣದೊಳು || ೪೭ ||

ಭಾವಾರ್ಥ:— ಲವನ ಬಾಣಸಮೂಹದ ಹಾವಳಿಯನ್ನು ವರ್ಣಿಸುವದು ಅಸಾಧ್ಯವು ಅವು ಶತ್ರುಗಳನ್ನು ಮುತ್ತಿ ಅವರ ಶರೀರಗಳನ್ನು ಸವರಿಕೊಂಡು ಹೋದವು ಆಕಾಶದಲ್ಲಿ ಗುಂಪು ಗುಂಪಾಗಿ ಹಾರಿ ಶತ್ರುಗಳನ್ನು ಹರಿದು ಕೊಂದವು ಆನೆ, ಕುದುರೆಗಳನ್ನು ಮುತ್ತಿ ( ಅವುಗಳ ಮಯ್ಯಲ್ಲಿ ) ನಟ್ಟು ಸೀಳಿಬಿಟ್ಟವು. ಮತ್ತು ನಾನಾಪ್ರಕಾರವಾಗಿ ಎಲ್ಲಸೈನ್ಯವನ್ನು ಕೆಡವಿ, ಅಸ್ಥ ವ್ಯಸ್ಥವಾಗಿ ತಲ್ಲಿದವು. ಸೈನ್ಯದ ಮಧ್ಯದಲ್ಲಿ ಸೇರಿ, ಅನೇಕ ಜನರಿಗೆ, ಘಾಯುಮಾಡಿದವು. ಮತ್ತು ಅನೇಕ ಜನರ ಶಿರಗಳನ್ನು ತತ್ತಕ್ಷಣದಲ್ಲಿಯೇ ಛೇದಿಸಿದವು.

**ಕ. ಶ.** ಆವಳಿ - ಸಮೂಹ ( ಗುಂಪು ) ಕವರು - ಮುತ್ತು, ಬಾನ್ - ಆ

ಕಾಶ, ಕೊಡಹು - ಜಲ್ಲು, ಪಚ್ಚು - ಸೀಳು ( ಘಾಯಮಾಡು, ) ಕೊಚ್ಚು - ಛೇದಿಸು,

ಭೂರಿಬಾಣದೊಳಹಿತ ಸೇನೆಯೋಳ್ಮಳಿದು ಚ |
ತ್ವಾರಿಂಶದನುಪಮ ಭ್ರಮಿಗಳಿಂ ತಡೆಗಡಿದು |
ವೀರ ಲವನಲ್ಲಿ ಕುಶನಂ ಕಾಣದೆಡಬಲದೊಳರಸೆ ರುಧಿರಾಕ್ಷನೆಂಬ ‖
ಶೂರಾಸುರಂ ಲವಣದಾನವನ ಮಾತುಲಂ |
ಶ್ರೀರಾಮ ಚರಣ ಶರಣಾಗತಂ ಸೀತಾ ಕು |
ಮಾರಕನ ಕರದ ಕೋದಂಡಮಂ ತುಡುಕಿದಂ ಮೇಲ್ವಾಯ್ದು ರೋಷದಿಂದೆ ‖ ೪೮ ‖

ಭಾವಾರ್ಥ:— ಆ ಶೂರನಾದ ಲವನು ತನ್ನ ಬಹಳವಾದ ಬಾಣಗಳಿಂದ ನಾಲ್ವತ್ತು ಭ್ರಮಿಗಳುಳ್ಳ ಆ ಶತ್ರು ಸೈನ್ಯವನ್ನು ಸಿಟ್ಟಿನಿಂದ ಸಂಹರಿಸಿನನು. ಆ ಮೇಲೆ ಹತ್ತರ ಕುಶನನ್ನು ಕಾಣದೆ, ಅತ್ತಿತ್ತ ಹುಡುಕಹತ್ತಿದನು. ಅಷ್ಟರಲ್ಲಿ ಲವಣಾಸುರನ, ಸೋದರಮಾವನಾದ, ರುಧಿರಾಕ್ಷನೆಂಬ ದೈತ್ಯನು ಅ ಸೀತೆಯ ಬಾಲಕನಾದ ಲವನನ್ನು ತ್ವೇಷದಿಂದ ಮುತ್ತಿ ಅವನ ಕಯ್ಯಲ್ಲಿದ್ದ ಧನುಷ್ಯವನ್ನು ಕಸಿದುಕೊಂಡನು.

**ಕ. ಶ.** ಭೂರಿ – ಬಹಳ, ತಡೆಗಡೆ – ಸಂಹರಿಸು, ಚತ್ವಾರಿಂಶತ್ – ನಾಲ್ವತ್ತು, ಅರಸು - ಹುಡುಕು, ತುಡಿಕಿದಂ - ಕಸೆದುಕೊಂಡನು, ಮೇಲ್ವಾಯ್ದು - ಮುತ್ತು

ಕರದ ಬಿಲ್ಲಂ ಕಿತ್ತು ಕೊಂಡೋಡುವಸುರನಂ |
ಭರದಿಂದೆ ಬೆಂಬತ್ತಿ ಪೋಗದಿರ್ಪೋಗದಿ |
ರ್ತಿರುಗೆನುತೆ ವಾಲ್ಮೀಕಿಮುನಿಪನಿತ್ತಗ್ನಿ ಮಂತ್ರಧ್ಯಾನಮಂ ಮಾಡಲು ‖
ದೊರೆಕೊಂಡುದೊಂದು ಚಕ್ರಂ ಬಳಿಕ ಲವನದಂ |
ಧರಿಸಿ ಚಕ್ರಾಯುಧಂ ತಾನೆನಲ್ಕಂಗೊಳಿಸು |
ತುರವಣಿಸಿ ರುಧಿರಾಕ್ಷನಂ ಗಗನದೋಳ್ಪಿಡಿಯೆ ಕಂಡವನ ಪಡೆ ಕವಿದುದು ‖ ೪೯ ‖

ಭಾವಾರ್ಥ:— ಕಯ್ಯಲ್ಲಿಯ ಧನುಸ್ಸನ್ನು ಕಸೆದುಕೊಂಡು ಓಡಿಹೋಗುವ ಆ ದೈತ್ಯನನ್ನು ಅವಸರದಿಂದ ಬೆನ್ನಟ್ಟಿ "ಹೊಗೇಬೆಡ! ಹೋಗಬೇಡ? ತಿರುಗು" ಅನ್ನುತ್ತ ವಾಲ್ಮೀಕಿಮುನಿಯ ಉಪದೇಶದ ಅಗ್ನಿಮಂತ್ರದ; ಧ್ಯಾನವನ್ನುಮಾಡಿ, ಒಂದು ಚಕ್ರವನ್ನು ಸಂಪಾದಿಸಿದನು. ಲವನು ಆದನ್ನು ಧರಿಸಲು ವಿಷ್ಣುವಿನಂತೆಕಂಡನು. ಆಮೇಲೆ ಅರ್ಭಟಿಸಿ ಆ ಚಕ್ರಾಯುಧದಿಂದ ರುಧಿರಾಕ್ಷನನ್ನು ಆಕಾಶದಲ್ಲಿ ಎತ್ತಿಹಿಡಿಯಲು ಆ ಸೈನ್ಯವು ಮತ್ತೆ ಅವನನ್ನು ಮುತ್ತಿತು.

**ಕ. ಶ.** ಬೆಂಬತ್ತಿ – ಬೆನ್ನಟ್ಟಿ, ದೊರೆಕೊಳ್ಳು - ಸಂಪಾದಿಸು, ಪಿಡಿದು – ಎತ್ತಿಹಿಡಿಯಲು, ಕವಿದುದು - ಮುತ್ತಿತು.

ಮತ್ತ್ರಗುಬಿದನಿತು ಬಲಮಂ ಕರದ ಚಕ್ರದಿಂ |
ತತ್ತರದರಿದು ರಾಕ್ಷಸೇಂದ್ರನಂ ಬಿಡದೆ ಲವ |
ಸೊತ್ತ್ರಾಯುಮಂ ಮಾಡುತಿರೆ ಕಂಡು ದಶರಥ ನೃಪತಿಯ ಮಂತ್ರಿಯ ತನುಜರು ‖

ಹತ್ತುಮಂದಿ ಪ್ರಸಿದ್ಧ ಪ್ರಧಾನಿಗಳಾಗ ||
ಹತ್ತುಹತ್ತಂಬುಗಳನೋರೊರ್ವರೆಚ್ಚು ಕಡಿ |
ಹತ್ತುಹತ್ತಾಗೆ ಬಾಲಕನ ಪಾರುಂಬಳೆಯನಾಕ್ಷಣಂ ಖಂಡಿಸಿದರು || ೫೦ ||

ಭಾವಾರ್ಥ:— ಆಮೇಲೆ ತ್ವೇಷದಿಂದ ಏರಿಬರುತ್ತಿರುವ ಆ ಎಲ್ಲ ಸೈನ್ಯವನ್ನು, ಕೈಯ್ಯಲ್ಲಿಯ ಚಕ್ರದಿಂದ, ಭ್ರಮೆಉಂಟಾಗುವಹಾಗೆ ಸಂಹರಿಸಿದನು. ಲವನು ಆರುಧಿರಾಕ್ಷನನ್ನು ಒಂದೇಸವನೆ ಹಣ್ಣಿಗೆತರುತ್ತಿರಲಾಗಿ, ಇದನ್ನುಕಂಡು ದಶರಥರಾಜನ ಮಂತ್ರಿಯುಮಕ್ಕಳು ಹತ್ತುಮಂದಿ, ಪ್ರಸಿದ್ಧ ಪ್ರಧಾನಿಗಳು, ಒಬ್ಬೊಬ್ಬರು ಹತ್ತತ್ತು ಬಾಣಗಳನ್ನು ಅವನಮೇಲೆ ಬಿಟ್ಟರು. ಮತ್ತು ಅವನ ಕೈಯಲ್ಲಿಯ ಚಕ್ರಾಯುಧವನ್ನು ಒಂದೊಂದು, ನೂರುಚೂರಾಗುವಂತೆ ತುಂಡರಿಸಿದರು.

**ಕ. ಶ.** ಉಗುಬಿದ – ಅರ್ಭಟಿಯಿಂದಮೇಲೆಬೀಳುವ. ಉರುಬು – ತ್ವೇಷ. ತತ್ತರದಂ - ಭ್ರಮೆಉಂಟಾಗುವಹಾಗೆ ಸಂಹರಿಸು, ಒತ್ತಾಯಮಂ ಮಾಡುತಿರೆ ಹಣ್ಣಿಗೆತರುತ್ತಿರಲು, ಪಾರುಂಬಳೆ – ಚಕ್ರ.

ಕರದ ಚಕ್ರಂ ಪೋಗೆ ಪರಿಘಮಂ ಕೊಂಡು ಲವ |
ನುಗವಣಿಸಿ ಹೊಯ್ದನಿಬರಂ ಕೆಡಪೆ ಮತ್ತೆ ಬಂ |
ದುರುಗದಾದಂಡಮಂ ಕೊಂಡು ರುಧಿರಾಕ್ಷನೀತನ ಪಣೆಯನಪ್ಪಳಿಸಲು ||
ಇರದೆ ಮೂರ್ಛಿತನಾಗಿ ಬಾಲಕಂ ಕೂಡೆ ಚೇ |
ತರಿಸಿಕೊಂಡೆದ್ದು ಕುಂತದೊಳಾಮಹಾಸುರನ |
ಶಿರವನರಿದಾದಿತ್ಯನಿತ್ತನಿಜಚಾಪಮಂ ತೆಗೆದುಕೊಂಡಂ ಧುರದೊಳು || ೫೧ ||

ಭಾವಾರ್ಥ:— ಕೈಯೊಳಗಿನಚಕ್ರವು ಹೋದಕೂಡಲೆ ಲವನು ಲಾಳಮುಂಡಿಗೆಯನ್ನು ತೆಗೆದುಕೊಂಡು ಶತ್ರುಗಳಮೇಲೆ ಬಿದ್ದು, ಅವರೆಲ್ಲರನ್ನು ಸಂಹರಿಸಿದನು. ಆಗ ರುಧಿರಾಕ್ಷನು ಗದೆಯನ್ನು ಕೈಯಲ್ಲಿತೆಗೆದುಕೊಂಡು ಲವನಹಣೆಗೆ ಅಪ್ಪಳಿಸಲು, ಕೂಡಲೆ ಅವನು ಮೂರ್ಛಿತನಾದನು. ತೀವ್ರನೇ ಎಚ್ಚರಹೊಂದಿ ಭಾಲೆಯಿಂದ ಆರುಧಿರಾಕ್ಷನ, ತಲೆಯನ್ನು ಹೊಡೆದು, ರವಿಯುಕೊಟ್ಟ, ಧನುಸ್ಸನ್ನು ಯುದ್ಧಕ್ಕೆತೆಗೆದುಕೊಂಡನು.

**ಕ. ಶ.** ಪರಿಘ – ಲಾಳಮುಂಡಿಗೆ, ಅನಿಬರಂ – ಅವರೆಲ್ಲರನ್ನು, ಉರುಗದಾ - ದೊಡ್ಡಗದೆ, ಕುಂತ - ಭಾಲೆ, ಆದಿತ್ಯ – ರವಿ ( ಸೂರ್ಯ, ) ಧುರ - ಯುದ್ಧದ ಮುಂಭಾಗ.

ಬಿಡದೆ ರುಧಿರಾಕ್ಷ ರಾಕ್ಷಸನಂ ರಣಾಗ್ರದೊ |
ಳ್ಕಡಹಿ ನಿಜಚಾಪ ಚಾಪಲಹಸ್ತನಾಗಿ ಲವ |
ನಡಸಿದರಿಚತುರ ಚತುರಂಗಮಂ ಸಂಹರಿಸತೊಡಗಿದಂ ಮತ್ತೆಮುಳಿದು ||

ತೊಡವುಗಳ ಕಾಯಕಾಯತಮಾದ ಜೋಡುಗ ।
ಳ್ಕಡಿಯೆ ಕುಣಪಕ್ಕೆ ಪಕ್ಕೆಗಳಾಗಿ ಪಟುಭಟ ।
ರ್ಪೊಡೆಗೆಡೆದರಾಗ ರಾಗದೊಳಮರನಾರಿಯರ್ತಕ್ಕೈಸಲಂಬರದೊಳು ॥ ೫೨ ॥

ಭಾವಾರ್ಥ:— ರಾಕ್ಷಸನಾದ ರುಧಿರಾಕ್ಷನನ್ನು ಕೂಡಲೇ ಸಂಹರಿಸಿ ಕೈಯಲ್ಲಿಯ ಖಡ್ಗವನ್ನು ತಿರುವುತ್ತ ವೈರಿಗಳ ಚತುರವಾದಚತುರಂಗಸೈನ್ಯವನ್ನು, ಭರದಿಂದ ನಾಶಗೊಳಿಸಹತ್ತಿದನು. ಆಗ ಮೈಯಲ್ಲಿತೊಟ್ಟ ಕವಚ, ಶಿರಸ್ತ್ರಾಣ, ಮುಂತಾದ ಉಡುಪುಗಳು, ವೀರರ ದೇಹಗಳಿಂದ ಕಡಿದುಬಿದ್ದವು. ಎರಡೂಬದಿಯಲ್ಲಿಯ ವೀರರು ಪ್ರೇತರಾಗಿ ಬಿದ್ದರು. ಆಗ ಆಕಾಶದಲ್ಲಿ “ ಅಪ್ಸರಾ ಸ್ತ್ರೀಯರು ( ಯುದ್ಧದಲ್ಲಿ ) ಮಡಿದ ವೀರರನ್ನು ಪ್ರೀತಿಯಿಂದ ಆಲಿಂಗಿಸುತ್ತಿದ್ದರು. ”

**ಕ. ಶ.** ಚಾಪಲಹಸ್ತ – ಒಂದೇಸವನೇತಿರುಗುವಕೈ, ಆಯತ – ವಿಸ್ತಾರವಾದ. ಕುಣಪ – ಪ್ರೇತ ( ಹೆಣ, ) ಪಟುಭಟರು - ಬಹಳಶೂರರು, ಪೊಡೆಗಡೆದರು– ಉರುಳಿದರು ( ಬಿದ್ದರು, ) ರಾಗ - ಪ್ರೀತಿ, ಅಂಬರ - ಆಕಾಶ, ಅಮರಸ್ತ್ರೀಯರು – ಅಪ್ಸರಾಸ್ತ್ರೀಯರು.

ಪಡೆ ಮಡಿಯುತಿರ್ದುದು ಲವಾಸ್ತ್ರದಿಂತಿತ್ತ ಕುಶ ।
ನೊಡನೆ ಸೌಮಿತ್ರಿಗಾದುದು ಯುದ್ಧಮಾಗ ಕಿವಿ ।
ಗಡೆಗೆ ತೆಗೆದೆಚ್ಚನೈದಂಬುಗಳನಿದಿರಾಗಿ ಭೂಮಿಜಯ ಸುತನ ಮೇಲೆ ॥
ಕಡುಗಿ ಖಾತಿಯೊಳೀತನೊಂದುಸರಳಂ ಪೂಡಿ ।
ಬಿಡಲೂರ್ಮಿಳಾವಲ್ಲಭನ ತೇರೆರಡುಗಳಿಗೆ ।
ಬಿಡದೆ ತಿರುಗಿತು ಬವಣಿಗೊಂಡು ರಥವಾಜಿ ಗಳ್ಪೊಡೆಗೆಡೆದುವೇನೆಂಬೆನು ॥ ೫೩ ॥

ಭಾವಾರ್ಥ:— ಲವನ ಅಸ್ತ್ರದಿಂದ ಸೈನ್ಯವು ಸಾಯುತ್ತಿರುವಾಗ ಇತ್ತ ಕುಶನೊಡನೆ ಲಕ್ಷ್ಮಣನಕೂಡ ಯುದ್ಧವಾಯಿತು ( ಲಕ್ಷ್ಮಣನು ) ಕಿವಿಯವರೆಗೆ ಬಿಲ್ಲನ್ನು ಜಗ್ಗಿ, ಐದುಬಾಣಗಳನ್ನು ಕುಶನಮೇಲೆಬಿಡಲು, ( ಕುಶನು ) ಅತಿಕ್ರೋಧದಿಂದ ಒಂದುಬಾಣವನ್ನು ಲಕ್ಷ್ಮಣನಮೇಲೆ ಬಿಡಲು ಅವನ ರಥವು ಎರಡುಘಳಿಗೆಯವರೆಗೆ ಒಂದೇಸವನೆ ಗರಗರನೆ ತಿರುಗಿತು, ರಥದ ಕುದುರೆಗಳು ನೆಲಕ್ಕೆ ಬಿದ್ದವು. ಏನು ಹೇಳಲಿ!

**ಕ. ಶ.** ಸೌಮಿತ್ರಿ - ಲಕ್ಷ್ಮಣ, ಭೂಮಿಜಯುಸುತ - ಕುಶನು, ( ಲವನು ) ಊರ್ಮಿಳಾವಲ್ಲಭ - ಲಕ್ಷ್ಮಣ, ಭವಣಿ - ಭ್ರಮಣ, ಭವಣಿಗೊಂಡು - ವರ್ತುಳಾಕರವಾಗಿ; ಗರಗರನೆ ತಿರುಗಿ.

ಮೆಚ್ಚಿದಾ ಬಾಲಕನ ವಿಕ್ರಮಕೆ ಲಕ್ಷ್ಮಣಂ ।
ಪೆಚ್ಚಿದತಿರೋಷದಿಂ ಮತ್ತೊಂದು ರಥಕಡ ।
ರ್ಚ್ಚಿ ನೆರಡಂಬಿನಿಂದೀತನ ಕಿರೀಟಮಂ ಕವಚಮಂ ಮೂರರಿಂದೆ ॥

ಕೊಚ್ಚಿ ಕೆಡಹಿದನಾಗ ಜಾನಕಿಯ ಸೂನು ಪೆರೆ |
ಯುಚ್ಚಿದಹಿಪತಿಯಂತೆ ಶೌರ್ಯವಿಮ್ಮಡಿಸೆ ನಗು |
ತುಚ್ಚರಿಸಿದಂ ವಿನಯಪೂರ್ವಕದೊಳರಸ ಕೇಳಾರಾಘವಾನುಜಂಗೆ || ೫೪ ||

ಭಾವಾರ್ಥ:— ಲಕ್ಷ್ಮಣನು ಕುಶನಪರಾಕ್ರಮಕ್ಕೆಮೆಚ್ಚಿದನು ಬಹಳಕೋಪದಿಂದ ಮತ್ತೊಂದುರಥವನ್ನು ಹತ್ತಿ ಎರಡುಬಾಣಗಳಿಂದ, ( ಕುಶನ ) ಕಿರೀಟವನ್ನೂ, ಮೂರುಬಾಣಗಳಿಂದ ಕವಚವನ್ನೂ, ಹೊಡೆದು ( ಚುಚ್ಚಿ ) ಕೆಡವಿದನು. ಆಗ ಕುಶನು, ಪರಿಹೋದ ಹಾವಿನಂತೆ ಇಮ್ಮಡಿ ಶೌರ್ಯದಿಂದ ಮತ್ತೂ ವಿನಯದಿಂದ ನಗುತ್ತ ಲಕ್ಷ್ಮಣನಿಗೆ ಈ ಪ್ರಕಾರನುಡಿದನು, ಜನಮೇಜಯನೇ ( ಅದನ್ನು ) ಕೇಳು ?

**ಕ. ಶ.** ಪೆಚ್ಚಿದ - ಹೆಚ್ಚಿದ, ಅಡರ್ದು - ಹತ್ತಿ ( ಏರಿ ) ಕೊಚ್ಚಿ - ಚುಚ್ಚಿ ಅಹಿಪತಿ ಹಾವು.

ಧುರದೊಳ್ಕಿರೀಟಕವಚದ ಪೊರೆಯಿದೇಕೆಂದು |
ಪರಿಹರಿಸಿದುಪಕಾರಕಪಕಾರಮಂ ಮಾಡೆ |
ನುರುಸೈನ್ಯಭಾರಮಂ ನಿನಗೆ ಬಿಡಿಸುವೆನೀಗ ನೋಡಾದೊಡೆನುತೆ ಕುಶನು ||
ವರವಹ್ನಿ ಸೂಕ್ತದೊಳಥರ್ವಮಂತ್ರದ ಪುರ |
ಶ್ಚರಣೆಯಿಂದನಲಾಸ್ತ್ರಮಂ ಪೂಡಿ ತಗೆದಿಸ |
ಲ್ಕುರಿದುದು ಚತುರ್ಬಲಮಕಾಲದೊಳ್ಪುರಹರಂ ಪಣೆಗಣ್ದೆರೆದನೆನಲ್ಕೆ || ೫೫ ||

ಭಾವಾರ್ಥ:— “ ಲಕ್ಷ್ಮಣನೇ? ” ಕಿರೀಟ-ಕವಚಗಳ ಭಾರವೇಕೆಂದು ಅವನ್ನು ತೆಗೆಯಿಸಿ ನೀನುನನಗೆ ಉಪಕಾರವನ್ನೇಮಾಡಿದಿ ! ಈ ಉಪಕಾರಕ್ಕೆ ಅಪಕಾರವನ್ನೆಂದೂ ಮಾಡೆನು; ಆದ್ದರಿಂದ ನಿನ್ನಮೇಲಿರುವ ಈ ಸೈನ್ಯದ ಭಾರವನ್ನೇ ಕಡಿಮೆ ಮಾಡುವೆನು. ಇಕೋ ನೋಡುಎಂದುನುಡಿದು. ಕುಶನು ಅಗ್ನಿಮಂತ್ರವನ್ನು ಅಥರ್ವಣವೇದಮಂತ್ರದಿಂದ ಉಚ್ಚರಿಸಿ, ಅಗ್ನ್ಯಾಸ್ತ್ರವನ್ನು ಹೂಡಿಬಿಟ್ಟನು. ಆಗ ಆ ಅಸ್ತ್ರವು ತ್ರಿಪುರಸಂಹಾರಿಯಾದ ಶಂಕರನು ತನ್ನ ಮೂರನೇಕಣ್ಣನ್ನು ತೆರೆದನೆನ್ನುವಹಾಗೆ ನಾಲ್ಕೂಕಡೆಗೂ ಪ್ರಜ್ವಲಿಸ ಹತ್ತಿತು.

**ಕ. ಶ.** ಪೊರೆ - ಭಾರ, ವಹ್ನಿ – ಅಗ್ನಿ, ಸೂಕ್ತ - ಮಂತ್ರ; ಪುನಶ್ಚರಣೆ-ಉಚ್ಚಾರಮಾಡೋಣ, ಅನಲಾಸ್ತ್ರ – ಅಗ್ನ್ಯಸ್ತ್ರ, ಅಕಾಲದೊಳ್ – ಪ್ರಳಯಕಾಲದಲ್ಲಿ, ಪುರಹರ – ಶಂಕರ.

ಬಲಮೆಲ್ಲಮಂ ಸುಡುವ ಪಾವಕ ಜ್ವಾಲೆಯಂ |
ಕಲಿಲಕ್ಷ್ಮಣಂ ಕಂಡು ವರಣಾಸ್ತ್ರದಿಂದಂ |
ನಿಲಿಸಲ್ಕೆ ಬಾಲಕಂ ನಸುನಗುತೆ ವಾಯುವ್ಯಮಾರ್ಗಣವ ನಿಸಲು ||
ಕುಲಶೈಲಮಂ ಕಿತ್ತು ಬಿಸುಡುವಂದದ ಗಾಳಿ |
ಸಲೆ ಬಡಿದು ಪಡೆಗಳಂ ಕೆಡಹುತಿರೆ ನಡೆತಂದು |
ನೆಲವುಗೊಂಡೂರ್ಮಿಳಾಕಾಂತನಂ ಪೆರಗಿಕ್ಕಿ ಕಾಲಜಿತುವಿದಿರಾದನು || ೫೬ ||

ಭಾವಾರ್ಥ:— ಆ ಶೂರನಾದ ಲಕ್ಷ್ಮಣನು ತನ್ನ ಎಲ್ಲಸೈನ್ಯವನ್ನು ನಾಶ ಮಾಡುವ ಬೆಂಕಿಯಜ್ವಾಲಿಯನ್ನು ನೋಡಿ ವರುಣಾಸ್ತ್ರದಿಂದ ಮಳೆಗರೆದು ಅದನ್ನು ಹೋಗಲಾಡಿಸಲಾಗಿ ( ನೊಂದಿಸಲಾಗಿ ) ಆ ಬಾಲಕನು ಮುಗುಳುನಗೆಯಿಂದ ವಾಯುವ್ಯಾಸ್ತ್ರಪ್ರಯೋಗವನ್ನು ಮಾಡಿದನು. ವಾಯುವ್ಯಾಸ್ತ್ರದಿಂದ ( ಬಿಟ್ಟಘಾಳಿಯಿಂದ ) ಕುಲಪರ್ವತವೂಸಹ ಕಿತ್ತುಬೀಳುವಹಾಗೆ ಎಲ್ಲಸೈನ್ಯವು ನಾಶವಾಗುತ್ತಿರಲು ಆ ಉರ್ವಿಳೆಯ ಗಂಡನಾದ ಲಕ್ಷ್ಮಣನ ಅಪ್ಪಣೆಯನ್ನು ಪಡಕೊಂಡು ಕಾಲಜಿತುವು ಅವನನ್ನು ಬದಿಗೆ ಸರಿಸಿ ಕುಶನಮೇಲೆ ಸಾಗಿಬಂದನು.

**ಕ. ಶ.** ಕಲಿ – ವೀರ ವರುಣಾಸ್ತ್ರ – ಮಳೆಗರೆಯುವಅಸ್ತ್ರ ಮಾರ್ಗಣ –– ಬಾಣ ಎಸಲು - ಪ್ರಯೋಗಿಸಲು ಕುಲಶೈಲ – ಕುಲಪರ್ವತ ಶಲವುಗೊಂಡು – - ಅಪ್ಪಣೆಪಡಕೊಂಡು ಪೆರಗಿಕ್ಕಿ - ಬದಿಗೆಸರಿಸಿ.

ಭುಜಬಲಕೆ ಪಾಡಲ್ಲ ತರಳನೆಂದುಳುಹಿದೊಡೆ ।
ವಿಜಯನಾದಪೆ ಬೇಡ ಹೋಗೆಲವೊ ಕಾರುಣ್ಯ ।
ವೃಜುವಲ್ಲ ತಾನೆನುತೆ ಕಾಲಜಿತುವೆಚ್ಚೊಡಾತನ ಬಾಣಮಂ ಖಂಡಿಸಿ ॥
ಅಜಗಳಸ್ತನದಂತೆಸೆವ ನಿನ್ನ ಪೌರುಷಂ ।
ನಿಜವಾದೊಡಾಂ ಸೈರಿಸುವೆ ನಲ್ಲದಿರ್ದೊಡಾ ।
ರಜದಿಂದೆ ಪುಸಿವೇಳ್ದ ನಾಲಗೆಯನರಿವೆ ನೆಂದಾಕುಶಂ ಕೊಲ್ಗರೆದನು ॥ ೫೭ ॥

ಭಾವಾರ್ಥ:— ಕಾಲಜಿತುವು ಅಂದದ್ದು ! ನೀನುನನ್ನ ಬಾಹುಬಲಕ್ಕೆ ಯೋಗ್ಯನಲ್ಲ ಹುಡುಗನೆಂದುಬಿಟ್ಟುಕೊಟ್ಟರೆ ವಿಜಯವನ್ನು ಹೊಂದಬೇಕೆನುವಿಯಾ? ” “ ಸಾಕು; ಹೋಗು! ನಿನಗೆ ದಯತೋರಸುವದು ಯೋಗ್ಯವಲ್ಲಾ ” ಹೀಗೆನ್ನುತ್ತ ಅ ಕಾಲಜಿತುವು ಅವನಮೇಲೆ, ಬಾಣಗಳನ್ನುಬಿಟ್ಟನು. ಅವುಗಳನ್ನು ಕುಶನು ಅಲ್ಲಿಯೇತುಂಡರಿಸಿದನು. ನಿನ್ನಪೌರುಷವು; ಆಡಿನಕೊರಳಲ್ಲಿಯ ಮೊಲೆಗಳಂತೆ ಇರುವದು. ಅದು ( ಪೌರುಷವು ) ನಿಜವಾಗಿಯೇ ನಿನ್ನಲ್ಲಿ ಇದ್ದರೆ ನಾನುಸಹಿಸುವೆನು. ಇಲ್ಲಿವಾದರೆ ಸುಳ್ಳುನುಡಿದಪಾಪಕ್ಕಾಗಿ ಆ ನಾಲಿಗೆಯನ್ನೆ ಸೀಳಿಬಿಡುವೆನು? ಎಂದುನುಡಿದು ಆ ಕುಶನು ಅವನಮೇಲೆ ಬಾಣಗಳ ಮಳೆಗರಿದನು.

**ಕ. ಶ.** ಪಾಡು – ಯೋಗ್ಯ, ಉಳುಹು - ಬಿಡು, ರುಜು - ಒಳ್ಳೇದು, ರಜ – ಪಾಪ, ಅರಿವೆನು - ಕತ್ತರಿಸುವೆನು, ಕೋಲ್ - ಬಾಣ.

ಇಸುಗೆಯೆಂತುಟೊ ಕುಶನ ಕಣೆ ರಣದೊಳಾರ್ದು ಗ ।
ರ್ಜಿಸುವ ನಾಲಗೆಯ ನರಿದುದು ಬಳಿಕ ಮೌನದಿಂ ।
ಮುಸಗಿ ರೋಪದೊಳುಬ್ಬಿ ಕಾಲಜಿತುವೆಚ್ಚೊಡಾ ಜಾನಕಿಯ ಸೂನು ನಗುತೆ ॥
ನಿಶಿತಾಸ್ತ್ರದಿಂದೆ ಕೈಕಾಲ್ತಲೆಗಳಂ ಕೂಡೆ ।
ಕಸುರಿದುದಯಲ್ಕಂಡು ಖತಿಯಿಂದೆ ಲಕ್ಷ್ಮಣಂ ।
ಮುಸುಕಿದಂ ಕೋಲ್ಗಳಂ ಬಾಲಕನಮೇಲೆ ಮೂಲೋಕದಾಲೋಕಮಡಗೆ ॥ ೫೮ ॥

ಭಾವಾರ್ಥ:— ಏನುಬಾಣದ ಹೊಡತವದು ? ಯುದ್ಧದಲ್ಲಿ ಅರ್ಭಟದಿಂದ ಗರ್ಜಿಸುತ್ತಿದ್ದ ಕಾಲಜಿತುವಿನ ನಾಲಿಗೆಯನ್ನು, ಕುಶನಬಾಣವು ಕೂಡಲೆ ಸೀಳಿಬಿಟ್ಟಿತು. ಆ ಮೇಲೆ ಕಾಲಜಿತುವು ಮನದಲ್ಲಿಯೇ ಕ್ಷುಬ್ಧನಾಗಿ ಬಹಳಸಿಟ್ಟಿಗೆದ್ದು ಪುನಃ ಕುಶನಮೇಲೆ ಬಾಣಗಳನ್ನು ಬಿಟ್ಟನು. ಆಗ್ಗೆ ಆ ಜಾನಕಿಯ ಮಗನಾದ ಕುಶನು, ನಗುತ್ತ ತನ್ನಹದನವಾದ ಶಸ್ತ್ರಗಳಿಂದ ಅವನ ಕೈ, ಕಾಲು, ತಲೆಗಳನ್ನು, ಕತ್ತರಿಸಿ ಚಲ್ಲಿದನು. ಇದನ್ನು ನೋಡಿ ಲಕ್ಷ್ಮಣನು ಸಿಟ್ಟಿನಿಂದ ಆ ಬಾಲಕನಮೇಲೆ ಬಾಣಗಳ ಮಳೆಗರಿದನು. ಅದರಿಂದ ಮೂರೂಲೋಕಗಳು ಮುಸುಕಿ ಕಾಣದಂತಾದವು.

**ಕ. ಶ.** ಯಸುಗೆ – ಬಾಣಪ್ರಯೋಗ, ಎಂತುಂಟೋ – ಯಾವಬಗೆಯದೋ, ( ಎಂಥದೋ, ) ಕಣೆ - ಬಾಣ, ಆರ್ದು - ಅರ್ಭಟಿಸಿ, ಅರಿದು – ಕತ್ತರಿಸಿ, ಮಸಗಿ- ಕ್ಷುಬ್ಧನಾಗಿ, ನಿಸಿತ - ಹದನವಾದ, ಉಸುರಿದರಿ - ತುಂಡುತುಂಡಾಗು, ಖತಿ - ಸಿಟ್ಟು, ಆಲೋಕ - ದೃಷ್ಟಿ, ಅಡಗು – ಕಾಣದಂತಾಗು,

ವೀರಲಕ್ಷ್ಮಣನಿಸುವ ಕೂರಂಬನೆಲ್ಲಮಂ |
ವಾರುವಂ ನಾಲ್ಕುಮಂ ತೇರಂ ಸುಕೇತುವಂ |
ನಾರಿಯಂ ಚಾಪ ತೂಣೀರಂಗಳಂ ಕೆಲದ ಚಾರರಂ ಸಾರಥಿಯನು ||
ಚಾರುಕವಚವನೆಚು ಧಾರಿಣಿಗೆ ಕೆಡಹಲ್ಕೆ |
ತೋರಗದೆಗೊಂಡೂರ್ಮಿಳಾರಮಣ ನೈತರ |
ಲ್ಧೀರನಹ ಸೀತಾಕುಮಾರಕಂ ಸಾಯಕದ ಸಾರದಿಂ ಪುಡಿಗೈದನು || ೫೯ ||

ಭಾವಾರ್ಥ:— ಕುಶನು ಸುಂದರವಾದ ಕವಚವನ್ನುತೊಟ್ಟು ಆವೀರಲಕ್ಷ್ಮಣನ ಎಲ್ಲಬಾಣಗಳನ್ನೂ ರಥವನ್ನೂ ನಾಲ್ಕೂಕುದುರೆಗಳನ್ನೂ ಅದರಮೇಲಿನ ಧ್ವಜವನ್ನೂ ಮತ್ತು ಬಿಲ್ಲಿನಹೆದೆ ಬತ್ತಳಿಕೆಗಳನ್ನೂ ಎಡಬಲದಲ್ಲಿದ್ದಕಾಲಾಳುಗಳನ್ನೂಮತ್ತು ಸಾರಥಿಯನ್ನೂ ನೆಲಕ್ಕೆಕೆಡವಿದನು. ಆಗ್ಗೆ ಲಕ್ಷ್ಮಣನು ಒಂದು ದೊಡ್ಡ ಗದೆಯನ್ನು ತಕ್ಕೊಂಡು ಅವನಮೇಲೆಏರಿಬರಲು, ಸೀತೆಯ,ಆವೀರಬಾಲಕನು ತನ್ನ ಬಾಣಗಳಹೊಡತದಿಂದ ಅದನ್ನು ಚೂರು ಚೂರಾಗಿಮಾಡಿದನು.

**ಕ. ಶ.** ಕೂರಂಬು – ಹದನವಾದಬಾಣ ವಾರುವ – ಕುದುರೆ ಸುಕೇತು - ಒಳ್ಳೇಧ್ವಜ ನಾರಿ - ಬಿಲ್ಲಿನಹೆದೆ ತುಣೀರ - ಬತ್ತಳಿಕೆ ಕೆಲ – ಎಡಬಲ ತೋರ – ದೊಡ್ಡ ಸಾಯಕ – ಬಾಣ ಅಹ – ಇರುವ ಸಾರ – ಬಲ

ಚರ್ಮಖಡ್ಗಂಗಳಿಂ ವಿವಿಧಾಯುಧಂಗಳಿಂ |
ದೂರ್ಮಿಳಾಕಾಂತನೊದಗಿದೊಡ ನಿತನೆಲ್ಲಮಂ |
ನಿರ್ಮಲಾಸ್ತ್ರಂಗಳಿಂ ಕತ್ತರಿಸಿ ವಾಲ್ಮೀಕಿಮುನಿವರಂ ತನಗೆ ಕೊಟ್ಟ ||
ಮರ್ಮಭೇದಿಗಳಾದುವೈದಂಬುಗಳ ನಿಸ |
ಲ್ಸುರ್ಮಣಿ ಧರಾತಳಕೆ ನಭದಿಂದುರುಳ್ವಂತೆ |
ಪೆರ್ಮರವೆಗೊಂಡು ಬೀಳ್ವನಿತರೊಳೊತ್ತೀಕ್ಷ್ಯಂಬುಕುಶನಾರ್ದು ಬೊಬ್ಬಿರಿದನು || ೬೦ ||

ಭಾವಾರ್ಥ:—ಲಕ್ಷ್ಮಣನು ಖಡ್ಗ ಮೊದಲಾದ ಅನೇಕವಿಧವಾದಆಯುಧಗಳಿಂದ ಯುದ್ಧಮಾಡಹತ್ತಿದನು ಆದರೆ ಕುಶನು ತನ್ನಶ್ರೇಷ್ಠವಾದಅಸ್ತ್ರಗಳಿಂದ ಅವುಗಳನ್ನೆಲ್ಲ ಕ ತ್ತರಿಸಿಚಲ್ಲಿದನು ಕಡೆಗೆ ವಾಲ್ಮೀಕಿಮುನಿಯು ತನಗೆಕೊಟ್ಟ ಹೃದಯವನ್ನು ಸೀಳಿಬಿಡುವಂ ಥಾ ಐದುಬಾಣಗಳನ್ನುಪ್ರಯೊಗಿಸಿದನು ಆಗ್ಯೆ ಆಕಾಶದಿಂದಸೂರ್ಯನು,ಅಕಸ್ಮಾತ್ತಾಗಿ ನೆಲಕ್ಕೆಉರುಳುವಂತೆ ಆಲಕ್ಷ್ಮಣನು ಘೋರವಾದಮೂರ್ಛೆಯಿಂದ,ನೆಲಕ್ಕೆಬಿದ್ದನು. (ಉ ರುಳಿದನು ) ಇವನ್ನುಕಂಡು ಕುಶನು ಸಡ್ಡುಹೊಡೆದು ಸಿಂಹಗರ್ಜನೆಮಾಡಿದನು.

**ಕ. ಶ.** ಮರ್ಮಭೇದಿ - ಹ್ರದಯವನ್ನುಸೀಳುವ ಸ್ವರ್ಮಣಿ – ಸೂರ್ಯ ದರಾತಳ – ಭೂಮಿ, ಭೂಪ್ರದೇಶ ನೆಲ. ಪೆರ್ಮರವೇ - ಘೊರಮೂರ್ಛೆ ತೊಳ್ಳುಯಿದು- – ಸಡ್ಡುಹೊಡೆದು ಬೊಬ್ಬಿರಿದನು – ಸಿಂಹಗರ್ಜನೆ ಮಾಡಿದನು.

ಅಘೋರತರದ ಸಂಗ್ರಾಮದೊಳ್ತಾನೆಚ್ಚ |
ಮೋಘವಾಗಿರ್ದ ಮುನಿ ಕೊಟ್ಟ ದಿವ್ಯಾಸ್ತ್ರದ ಮ |
ಹಾಘಾತಿಯಿಂದೆ ಕಡುನೊಂದು ಮೂರ್ಛಿತನಾಗಿ ಬಿದ್ದು ಭೂತಳದಮೇಲೆ ||
ರಾಘವಾನುಜನಿರೆ ಕುಶಂ ಬಳಿಕ ನಿಜಹಸ್ತ |
ಲಾಘವದೊಳಲ್ಲಿರ್ದರಂ ಸದೆದು ಲವನಂ ಬ |
ಲೌಘವೊತ್ತಾಯದಿಂ ಮುತ್ತಿಕೊಂಡಿರ್ದ ಕೋಲಾಹಲವ ನಾಲಿಸಿದನು || ೬೧ ||

ಭಾವಾರ್ಥ:— ಆ ಭಯಂಕರವಾದ ಯುದ್ಧದಲ್ಲಿ ತನಗೆ ವಾಲ್ಮೀಕಿಮು ನಿಯು ಕೊಟ್ಟ ಎಂದೂ ನಿರರ್ಥಕವಾಗದಂಥ ಆ ದಿವ್ಯಾಸ್ತ್ರದ ಹೊಡತದಿಂದ ಬಹಳ ಘಾಯಹೊಂದಿ ಮೂರ್ಛಿತನಾಗಿ ನೆಲದಮೇಲೆಬಿದ್ದ ಲಕ್ಷ್ಮಣನನ್ನು ನೋಡಿ ತನ್ನ ಕೈಚ ಪಲತೆಯಿಂದ ಉಳಿದವರನ್ನುಕೊಂದು ಲವನನ್ನು ಮುತ್ತಿಕೊಂಡಂಥ ಆಸೈನ್ಯಸಮೂಹದ ಗದ್ದಲವನು ಕೇಳಿದನು.

**ಕ. ಶ.** ಅಮೋಘ – ನಿರರ್ಥಕವಾಗದಂಥ ಕಡು - ಬಹಳ, ಹಸ್ತಲಾಘವ- ಕೈಚಪಲತೆ, ಸದೆದು - ಕೊಂದು, ಬಲೌಘ - ಸೈನ್ಯಸಮೂಹ.

ಶರ ಚಾಪ ಚರ್ಮ ಖಡ್ಗಂಗಳಂ ಕೊಂಡು ಕುಶ |
ನಿರದೆ ಲವನಿದ್ದೆಡೆಗೆ ಚಿಗದನಲ್ಲಿಂ ಖಗೇ |
ಶ್ವರನಂತೆ ರಗಿದನದ ನೇನೇಳ್ವೆ ನಳಿದುಳಿದ ರಿಪುವಾಹಿನೀ ಭ್ರಮಿಗಳು ||
ಪರೆದುವೆಣ್ಮೆಶೆಗಳಿಗೆ ಸೀತಾಕುಮಾರಕ |
ತಿರುಗಿದತುರಗಮಿಹ ಬನಕಾಗಿ ದೇವಪುರ |
ದರಸ ಲಕ್ಷ್ಮಿಶರಾಘವನಲ್ಲಿಗೈದಿದದೂತತರತಿವೇಗದಿಂದೆ || ೬೨ ||

ಭಾವಾರ್ಥ:— ಬಿಲ್ಲು, ಬಾಣ, ಖಡ್ಗ, ಮುಂತಾದ ಆಯುಧಗಳ್ನು ತಕ್ಕೊಂ ಡು ಕುಶನು, ಅಲ್ಲಿಯೇ ನಿಲ್ಲಲಾರದೆ ಲವನು, ಇದ್ದಸ್ಥಳಕ್ಕೆ ಜಿಗಿದನು. ಮತ್ತು ಗರು

ಡಪಕ್ಷಿಯಂತೆ ವೇಗದಿಂದ ಶತ್ರುಗಳಮೇಲೆ ಬಿದ್ದನು. ಆಗ್ಗೆ ನಾಶಹೊಂದಿ ಉಳಿದಂಥ ಆ ಶತ್ರು ಸೈನ್ಯ ಸಮೂಹಗಳು, ಎಂಟುದಿಕ್ಕಿನಲ್ಲಿ ಹರಿಬಿದ್ದು ಓಡಿಹೋದವು. ಆಗ, ಆ ಸೀತೆಯಮಕ್ಕಳಾವ ಲವಕುಶರು, ಮತ್ತೆ ಕುದುರೆಯನ್ನು ಕಟ್ಟಿದವನಕ್ಕೆ ಮರಳಿ ಬಂದಗು.

**ಕ. ಶ.** ಜಿಗಿದಸು - ಜಿಗಿದನು, ಖಗೇಶ್ವರ - ಗರುಡ, ಎರಗಿದನು - ಮೇಲೆಬಿದ್ದನು, ಅಳಿದ - ನಾಶಹೊಂದಿದ, ವಾಹಿನಿ - ಸೈನ್ಯ, ಪರಿದುವು - ಹರಿಬಿದ್ದುಓಡಿಹೋದವು, ಎಣ್ದೆಸೆ - ಎಂಟುದಿಕ್ಕುಗಳು.






ಸತ್ಯಪ್ರಕಾಶ ಪ್ರಿಂಟಿಂಗ ಪ್ರೆಸ್ ಗದಗ-ಶಿಟಿ.